CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ನವೆಂಬರ್ ೨೭, ೨೦೦೩ (ಮಾರ್ಗಶಿರ ೬, ಶಕ ವರ್ಷ ೧೯೨೫) | ಸಂಚಿಕೆ ೪೭ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ

**ಪ್ರ.ಸಂ. ಡಬ್ಲ್ಯೂಸಿಎ:ಎಫ್‌ಸಿ-32:2003**

**ಅರ್ಜಿದಾರರು**

1) ಶ್ರೀ ಚಿಕ್ಕ ವೆಂಕಟರಾಯಪ್ಪ ಬಿನ್ ಲೇಟ್ ನರಸಪ್ಪ, ಪರಗೋಡು ವಿಲೇಜ್, ಬಾಗೇಪಲ್ಲಿ ತಾ: ಕೋಲಾರ ಜಿಲ್ಲೆ

**ವಿರುದ್ಧ**

**ಪ್ರತಿವಾದಿಗಳು**

1) ಶ್ರೀ ಬಿ. ಭಾಸ್ಕರ್ ರಾಜು ಬಿನ್ ಬಸವರಾಜು, ನಂ. 2408, ಸಹಕಾರ ನಗರ, ಬೆಂಗಳೂರು.
2) ದಿ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂಪನಿ ಲಿಮಿಟೆಡ್, ನಂ. 143:144, ಸಿ.ಕೆ.ಎನ್. ಚೇಂಬರ್ಸ್, 1ನೇ ಮುಖ್ಯ ರಸ್ತೆ, ಶೇಷಾದ್ರಿಪುರಂ, ಬೆಂಗಳೂರು- 560020.

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ಚಿಕ್ಕ ವೆಂಕಟರಾಯಪ್ಪ ಬಿನ್ ಲೇಟ್ ನರಸಪ್ಪ ಅವರು ತಮ್ಮ ಮಗನಾದ ಶ್ರೀ ಚಿಕ್ಕ ನರಸಿಂಹಪ್ಪ ಅವರು 1ನೇ ಪ್ರತಿವಾದಿ ಶ್ರೀ ಬಿ. ಭಾಸ್ಕರ್ ರಾಜು ಬಿನ್ ಬಸವರಾಜು ರವರ ಬಳಿ ಚಾಲಕ : ಕ್ಲೀನರ್ : ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 14.5.2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 27.10.2003 ರಂದು ನೀಡಲಾಗಿದೆ.

**ಎಂ.ವಿ. ಲಕ್ಷ್ಮಣಸ್ವಾಮಿ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ

ಪಿ.ಆರ್. 1220

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ:152:ಡಿಟಿಸಿಆರ್:2001-02, ದಿನಾಂಕ: 16ನೇ ಅಕ್ಟೋಬರ್ 2003**

**ಉಪಸ್ಥಿತರು:** ಗೋವಿಂದಪ್ಪ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಅಬಕಾರಿ ಉಪ ನಿರೀಕ್ಷಕರು, ಉಳ್ಳಾಲ ಉಪ ವಲಯ, ಉಳ್ಳಾಲ

**ವಿರುದ್ಧ**

**ಆರೋಪಿಗಳು**

1) ಶ್ರೀ ಕೇನಿ ಡಿಸೋಜಾ (34 ವರ್ಷ) ಬಿನ್ ಬ್ಯಾಪ್ಟಿಸ್ಟ್ ಡಿಸೋಜಾ, ಪಾವೂರು, ಉಳಿಯ ಪಾವೂರು ಗ್ರಾಮ, ಅಡ್ಯಾರು ಅಂಚೆ, ಮಂಗಳೂರು ತಾಲ್ಲೂಕು.

**ಅರ್ಜಿದಾರರು:**

ಶ್ರೀ ಶರೀಫ್ ಬಿನ್ ಅಹಮ್ಮಬ್ಬ, ವಾಸ: ಸೂಜೀರ್ ಕೊಡಂಗೆ, ಪುದು ಪೋಸ್ಟ್, ಬಂಟ್ವಾಳ

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 14.10.2001 ರಂದು ಸಾಯಂಕಾಲ 6.30 ರ ಸಮಯ ಉಳ್ಳಾಲ ಉಪ ವಲಯದ ಅಬಕಾರಿ ಉಪ ನಿರೀಕ್ಷಕರು, ಪಾವೂರು ಗ್ರಾಮದ ಗಾಡಿಗದ್ದೆ ಸ್ಥಳದಲ್ಲಿ ನೇತ್ರಾವತಿ ನದಿಯ ದಡದಲ್ಲಿ ಒಂದು ನಾಡ ದೋಣಿಯಲ್ಲಿ ಒಬ್ಬ ಅಸಾಮಿಯು ಕುಳಿತಿದ್ದು, ಸಿಬ್ಬಂದಿಯನ್ನು ನೋಡಿದ ಆತನು ದೋಣಿಯನ್ನು ದೂಡಲು ಹೊರಟಿದ್ದು ಸದರಿ ದೋಣಿಯನ್ನು ಪರಿಶೀಲಿಸಿದಾಗ ದೋಣಿಯಲ್ಲಿ 30.000 ಲೀಟರು ಕಳ್ಳಭಟ್ಟಿ ಸಾರಾಯಿ ತುಂಬಿದ ಒಂದು ರಬ್ಬರ್ ಟ್ಯೂಬ್ ಹಾಗೂ 5.000 ಲೀಟರು ಗಾತ್ರದ ಕ್ಯಾನಿನಲ್ಲಿ 4.000 ಲೀಟರು ಕಳ್ಳಭಟ್ಟಿ ಸಾರಾಯಿಯಿದ್ದು ಅದನ್ನು ಮಾರಾಟಕ್ಕೆ ತಂದಿರುವುದಾಗಿ ಒಪ್ಪಿಕೊಂಡಿರುತ್ತಾನೆ. ಈ ರೀತಿ ಶರಾಬು ಹೊಂದಿ ಸಾಗಾಣಿಕೆ ಮಾಡಲು ಯಾವುದೇ ರಹದಾರಿ ಇಲ್ಲದಿರುವುದರಿಂದ ಇದು ಅಬಕಾರಿ ಕಾಯ್ದೆ ಕಲಂ 14,15 ರ ರೀತ್ಯಾ ಅಪರಾಧವಾಗಿದ್ದು, ಕಲಂ 34ರ ರೀತ್ಯಾ ಶಿಕ್ಷಾರ್ಹವಾಗಿದ್ದು, ಸ್ಥಳೀಯರು ಯಾರು ಪಂಚರಾಗಿ ಬಾರದ ಕಾರಣ ಇಲಾಖೆಯವರನ್ನೇ ಪಂಚರನ್ನಾಗಿಸಿಕೊಂಡು ಟ್ಯೂಬಿನಿಂದ ಹಾಗೂ ಪ್ಲಾಸ್ಟಿಕ್ ಕ್ಯಾನಿನಿಂದ ರಾಸಾಯನಿಕ ವಿಶ್ಲೇಷಣೆಗಾಗಿ 2 ಬಾಟಲುಗಳಲ್ಲಿ ಮಾದರಿ ತೆಗೆದು ಬಟ್ಟೆ ದಾರ ಸುತ್ತಿ ಸೀಲಿನಿಂದ ಸೀಲು ಮಾಡಿ, ಆರೋಪಿಯ ವಿಳಾಸ ಕೇಳಲಾಗಿ ಆತನು ಪಾವೂರು ಗ್ರಾಮದ ಪಾವೂರು ಉಳಿಯ ನಿವಾಸಿ ಕೇನಿ ಡಿಸೋಜಾ ಬಿನ್ ಬ್ಯಾಪ್ಟಿಸ್ಟ್ ಡಿಸೋಜಾ ಎಂದು ತಿಳಿಸಿದ್ದು ಆತನ ಹೆಸರು ಮತ್ತು ವಿಳಾಸ ಗುರುತಿನ ಚೀಟಿಯನ್ನು ಸ್ವತ್ತುಗಳಿಗೆ ಅಂಟಿಸಿ ಸ್ಥಳದಲ್ಲಿ ಮಹಜರನ್ನು ತಯಾರಿಸಿ ಆರೋಪಿಯನ್ನು ದಸ್ತಗಿರಿ ಮಾಡಿ ಸ್ವತ್ತುಗಳನ್ನು ಇಲಾಖೆಗೆ ವಶಪಡಿಸಿಕೊಂಡು ಗುನ್ಹೆ ಸಂಖ್ಯೆ 5/2001-02 ರ ಮೂಲಕ ದಾಖಲು ಮಾಡಿರುತ್ತಾರೆ. ಪ್ರಕರಣದ ಪ್ರಥಮ ಮಾಹಿತಿ ವರದಿಯನ್ನು ಮತ್ತು ಮಹಜರನ್ನು ನ್ಯಾಯಾಲಯಕ್ಕೆ ಹಾಗೂ ಈ ಪ್ರಾಧಿಕಾರಕ್ಕೂ ಸಲ್ಲಿಸಿ ಸ್ವತ್ತುಗಳನ್ನು ತಮ್ಮ ಅಧೀನದಲ್ಲಿ ಇಟ್ಟುಕೊಳ್ಳಲು ಪ್ರಾಧಿಕಾರದ ಅನುಮತಿಯನ್ನು ಪಡೆದಿರುತ್ತಾರೆ.

ದಿ: 30.10.2001 ರಂದು ನಾಡದೋಣಿಯ ಮಾಲೀಕರಾದ ಶರೀಫ್ ಎಂಬುವರು ತಮ್ಮ ವಕೀಲರ ಮುಖಾಂತರ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ ಜಪ್ತುಗೊಳಿಸಿರುವ ನಾಡದೋಣಿಯನ್ನು ಮಧ್ಯಂತರ ಬಿಡುಗಡೆಗೆ ಕೋರಿರುತ್ತಾರೆ. ಆದರೆ ನಾಡದೋಣಿಯನ್ನು ಮಧ್ಯಂತರ ಬಿಡುಗಡೆ ಮಾಡಿರುವುದಿಲ್ಲ.

ದಿ: 19.11.2001 ರಂದು ಈ ಪ್ರಾಧಿಕಾರದಿಂದ ಆರೋಪಿಗೂ, ನಾಡದೋಣಿಯ ಮಾಲೀಕರಿಗೂ ಕಾರಣ ಕೇಳಿ ನೋಟೀಸು ನೀಡಿದ್ದು, ಕಾರಣ ಕೇಳಿ ನೀಡಿದ್ದ ನೋಟೀಸಿಗೆ ದಿ: 3.12.2001 ರಂದು ಉತ್ತರವನ್ನು ಸಲ್ಲಿಸಿರುತ್ತಾರೆ. ನಾಡದೋಣಿಯ ಮಾಲೀಕರು ಬಂಟ್ವಾಳ ತಾಲ್ಲೂಕು ಸೂಜೀರು ಎಂಬಲ್ಲಿ ವಾಸಿಯೆಂದು ಸದ್ರಿ ದೋಣಿಯಲ್ಲಿ ಮೀನು ಹಿಡಿದು ಜೀವನಾಂಶ ಸಾಗಿಸುತ್ತಿದ್ದುದಾಗಿ ಮತ್ತು ನಾಡದೋಣಿಯನ್ನು ದಿನದ ಕೆಲಸ ಮುಗಿದಾಗ ನದಿಯ ದಂಡೆಯಲ್ಲಿ ಯಾವಾಗಲೂ ಬಿಡುತ್ತಿದ್ದುದಾಗಿ ತಿಳಿಸುತ್ತಾ ದಿ: 14.10.2001 ನದಿ ದಡದಲ್ಲಿ ಬಿಟ್ಟಿದ್ದು ಮರುದಿನ ಬೆಳಿಗ್ಗೆ ನೋಡಿದಾಗ ನಾಡದೋಣಿಯು ಕಾಣೆಯಾಗಿದ್ದು ಪೊಲೀಸಿನವರಲ್ಲಿ ದೂರು ಸಲ್ಲಿಸಲು ಹೋದಾಗ ದೋಣಿಯನ್ನು ಹುಡುಕಿ, ನಂತರ ದೂರು ಕೊಡಲು ತಿಳಿಸಿದರೆಂದು ನಂತರ ನಾಡದೋಣಿಯನ್ನು ಅಬಕಾರಿ ಇಲಾಖೆಯವರು ಜಪ್ತುಗೊಳಿಸಿರುವುದಾಗಿ ತಿಳಿಯಿತೆಂದು, ಇದರಿಂದ ಆತನ ಜೀವನಾಂಶದ ಸಂಪಾದನೆಗಾಗಿ ಇದೊಂದೇ ಮಾರ್ಗವಾಗಿದ್ದು ತೊಂದರೆಯಾಗುತ್ತದೆಯೆಂದು ನಾಡದೋಣಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಪ್ರಕ್ರಿಯೆಯನ್ನು ಬಿಟ್ಟು ನಾಡದೋಣಿಯನ್ನು ಹಿಂತಿರುಗಿಸಲು ಕೋರಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನೆಯ ಪರ 2 ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಅವರುಗಳ ಹೇಳಿಕೆಯನ್ನು ಪಡೆಯಲಾಗಿದೆ. ಅರ್ಜಿದಾರರ ಪರ ಯಾವುದೇ ಸಾಕ್ಷಿಯನ್ನು ಹಾಜರುಪಡಿಸಿರುವುದಿಲ್ಲ. ಈ ಪ್ರಕರಣದಲ್ಲಿ ಸರ್ಕಾರದ ಪರ ದೊರೆತಿರುವ ಸಾಕ್ಷ್ಯಾಧಾರಗಳ ಮೇಲೆ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿವೆ.

1. ದಿನಾಂಕ: 14.10.2001 ರಂದು ನಾಡದೋಣಿಯಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಣೆಗಾಗಿ ಹೊಂದಲಾಗಿತ್ತೇ?
2. ಸದರಿ ನಾಡದೋಣಿಯಲ್ಲಿ ಕಳ್ಳಭಟ್ಟಿ ಸಾರಾಯಿಯನ್ನು ಸಾಗಾಣಿಕೆಗೆ ಹೊಂದಿರುವುದು ತನ್ನ ತಿಳುವಳಿಕೆಗೆ ಬಾರದೇ ನಡೆಯಲಾಗಿತ್ತು ಎಂಬುದನ್ನು ದೋಣಿಯ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3. ಜಪ್ತುಪಡಿಸಲಾದ ದೋಣಿಯನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಿ ಆಧಾರಗಳ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದೂ, ಎರಡನೇ ಅಂಶವನ್ನು ನಕರಾತ್ಮಕವಾಗಿ ಇಲ್ಲವೆಂದೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ. 1:**

ಶ್ರೀ ಸೋಮಶೇಖರ, ಅಬಕಾರಿ ಉಪ ನಿರೀಕ್ಷಕರು, ಉಳ್ಳಾಲ ವಲಯ ಇವರು ದಿನಾಂಕ: 16.5.2002 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ಅವರು ದಿನಾಂಕ: 14.10.2001 ರಂದು ಸಂಜೆ 6.30 ಗಂಟೆ ಸಮಯದಲ್ಲಿ ಅಬಕಾರಿ ಧಾಳಿಗೆ ಹೋಗಿದ್ದಾಗ ನೇತ್ರಾವತಿ ನದಿಯ ದಡದಲ್ಲಿದ್ದ ಒಬ್ಬ ವ್ಯಕ್ತಿಯು ಅಬಕಾರಿ ಸಿಬ್ಬಂದಿಯನ್ನು ಕಂಡು ಓಡಲು ಮುಂದಾಗಲು ಕೂಡಲೇ ಅಬಕಾರಿ ರಕ್ಷಕ ಭಾಸ್ಕರ ಆತನನ್ನು ತಡೆದು ನಿಲ್ಲಿಸಿ ದೋಣಿಯನ್ನು ಪರಿಶೀಲಿಸಲಾಗಿ ಒಂದು ರಬ್ಬರ್ ಟ್ಯೂಬಿನಲ್ಲಿ 30 ಲೀಟರು ಕಳ್ಳಭಟ್ಟಿ ಸಾರಾಯಿ ಮತ್ತು 5 ಲೀಟರು ಕ್ಯಾನಿನಲ್ಲಿ 4 ಲೀಟರು ಕಳ್ಳಭಟ್ಟಿ ಸರಾಯಿ ಇರುವುದು ಕಂಡು ಬಂತು. ಆತನನ್ನು ವಿಚಾರಿಸಲಾಗಿ ಅದು ತನ್ನದೆಂದು ಒಪ್ಪಿಕೊಂಡನು. ನಂತರ ಸಾಕ್ಷಿಗೆ ಹತ್ತಿರದವರನ್ನು ಕರೆಯಲಾಗಿ ಯಾರೂ ಬಾರದ ಕಾರಣ ಇಲಾಖೆಯವರನ್ನು ಸಾಕ್ಷಿದಾರರನ್ನಾಗಿಸಿ ರಬ್ಬರ್ ಟ್ಯೂಬಿನಿಂದಲೂ ಕ್ಯಾನಿನಿಂದಲೂ ತಲಾ 180 ಮಿಲಿ ಸ್ಯಾಂಪಲ್‌ಗಾಗಿ ತೆಗೆದು ಮಾದರಿ ಸೀಸೆಗಳಿಗೂ ಹಾಗೂ ಟ್ಯೂಬ್ ಮತ್ತು ಕ್ಯಾನಿಗೂ ಬಟ್ಟೆದಾರ ಕಟ್ಟಿ ಇಲಾಖೆಯ ಸೀಲಿನಿಂದ ಸೀಲು ಮಾಡಿ ಆರೋಪಿಯ ವಿಳಾಸ ಕೇಳಲಾಗಿ ಆತನು ಕೇನಿ ಡಿಸೋಜಾ ಬಿನ್ ಬ್ಯಾಪ್ಟಿಸ್ಟ್ ಡಿಸೋಜಾ ಎಂದು ಪಾವೂರು ಉಳಿಯ ವಾಸಿ ಎಂದು ತಿಳಿಸಿದನು. ಆರೋಪಿಯ ವಿಳಾಸವಿರುವ ಪ್ರಮಾವ ಸಂಖ್ಯೆಯ ಗುರುತಿನ ಚೀಟಿಯನ್ನು ತಯಾರಿಸಿ ವಶಪಡಿಸಿಕೊಂಡ ವಸ್ತುಗಳಾದ ದೋಣಿ ಹಾಗೂ ಒಚ್ಚುವ ಕೋಲಿಗೆ ಅಂಟಿಸಿರುವುದಾಗಿ ಮತ್ತು ಮಹಜರನ್ನು ತಯಾರಿಸಿರುವುದಾಗಿ ತಿಳಿಸಿರುತ್ತಾರೆ. ಆರೋಪಿಯನ್ನು ಬಂಧಿಸಿ ನಂತರ ಬಿಡುಗಡೆ ಮಾಡಿ ಎಲ್ಲಾ ವಸ್ತುಗಳನ್ನು ಸರ್ಕಾರಕ್ಕೆ ವಶಪಡಿಸಿಕೊಂಡು ಪ್ರ.ಮಾ.ವ. ತಯಾರಿಸಿ ಪ್ರಮಾವ ಮಹಜರು ಮತ್ತು ಸ್ವತ್ತುಗಳ ಪಟ್ಟಿಯನ್ನು ಘನ ನ್ಯಾಯಾಲಯಕ್ಕೂ ಹಾಗೂ ಪ್ರಾಧಿಕಾರಕ್ಕೆ ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ. ನಂತರ ಪ್ರಕರಣದ ತನಿಖೆಯನ್ನು ಕೈಗೊಂಡು ಸದ್ರಿ ಪ್ರಕರಣದಲ್ಲಿ ವಶಪಡಿಸಿಕೊಂಡ ಸಾರಾಯಿಯಿಂದ ತೆಗೆದಿದ್ದ ಮಾದರಿ ಶೀಷೆಗಳನ್ನು ಅಬಕಾರಿ ರಕ್ಷಕ ಶ್ರೀ ದಿನಕರ ಇವರ ಮುಖಾಂತರ ದಿ: 16.10.2001 ರಂದು ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಿ ನಂತರ ಮಾದರಿ ಶೀಷೆಗಳನ್ನು ಮತ್ತು ವಿಶ್ಲೇಷಣಾ ವರದಿಯನ್ನು ದಿ: 17.11.2001 ರಂದು ಪಡೆದು ಪ್ರಕರಣದ ಅಂತಿಮ ಪಟ್ಟಿಯನ್ನು ಘನ ನ್ಯಾಯಾಲಯಕ್ಕೆ ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ. ಮಹಜರನ್ನು ನೋಡಿ ಅದನ್ನು ನಿಶಾನೆ ಪಿ-1 ಎಂದೂ ಪ್ರಥಮ ಮಾಹಿತಿ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-2, ರಾಸಾಯನಿಕ ತಜ್ಞರ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು. ಈ ಪ್ರಕರಣದ ಅರ್ಜಿದಾರರಾದ ಶರೀಫ್ ಅಹಮಬ್ಬ ಇವರು ಆ ದಿನದಂದು ದೋಣಿಯಲ್ಲಿರಲಿಲ್ಲ ಎಂದು ನಾಡ ದೋಣಿಯು ಯಾರಿಗೆ ಸೇರಿದ್ದು, ಎಂಬುದು ಗೊತ್ತಿಲ್ಲವೆಂದು ತಿಳಿಸಿರುತ್ತಾರೆ. ಅರ್ಜಿದಾರರ ಪರ ವಕೀಲರು ಹಾಜರಿಲ್ಲದ ಕಾರಣ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಗಿದೆ.

**ಪ್ರಾ.ಸಾ: 2**

ಶ್ರೀ ದಿನಕರ ಅಬಕಾರಿ ರಕ್ಷಕ, ಉಳ್ಳಾಲ ವಲಯ ಇವರು ಈ ಪ್ರಾಧಿಕಾರದ ಮುಂದೆ ದಿನಾಂಕ: 12.12.2002 ರಂದು ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ. ಅವರು ದಿನಾಂಕ: 16.10.2001 ರಂದು ಈ ಪ್ರಕರಣದ ಮಾದರಿ ಶೀಷೆ ಮತ್ತು ಕೋರಿಕೆ ಪತ್ರವನ್ನು ರಾಸಾಯನಿಕ ತಜ್ಞರಿಗೆ ಕೊಂಡು ಹೋಗಿ ನೀಡಿದ್ದು ದಿ: 17.1.2001 ಮಾದರಿ ಶೀಷೆ ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ನಿರೀಕ್ಷಕರ ಕಛೇರಿಗೆ ತಂದು ಒಪ್ಪಿಸಿರುವುದಾಗಿ ತಿಳಿಸಿದ್ದು ವಿಶ್ಲೇಷಣಾ ಪ್ರತಿಯನ್ನು ನೋಡಿರುತ್ತಾರೆ.

ಅರ್ಜಿದಾರರ ಪರವಕೀಲರು ಗೈರುಹಾಜರಿದ್ದುದರಿಂದ ಪಾಟೀಸವಾಲು ಇಲ್ಲವೆಂದು ಪರಿಗಣಿಸಲಾಯಿತು.

ಈ ಮೇಲಿನ ಸಾಕ್ಷ್ಯಾಧಾರಗಳಿಂದ ಹಾಗೂ ಕಾರಣಾಂಶಗಳಿಂದ ಹಾಗೂ ಹಾಜರುಪಡಿಸಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತು ಪಡಿಸಿರುವ ನಾಡದೋಣಿಯಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಯಾಗಿರುವುದು ಸ್ಪಷ್ಟವಾಗಿ ಸಾಭೀತಾಗಿರುತ್ತದೆ ಎಂಬ ಅಭಿಪ್ರಾಯದಿಂದ ಮೊದಲನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದು ಪರಿಗಣಿಸಿದೆ.

ಅರ್ಜಿದಾರರು ಹಾಗೂ ಅರ್ಜಿದಾರರ ಪರ ವಕೀಲರೂ ಹಲವಾರು ಬಾರಿ ನೋಟೀಸು ನೀಡಿದ್ದರೂ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ ಮತ್ತು ಪ್ರಕರಣದ ಸಾಕ್ಷಿ ವಿಚಾರಣೆಗೆ ಸಹಕಾರ ನೀಡಿರುವುದಿಲ್ಲ ಮತ್ತು ಅರ್ಜಿದಾರರ ಪರ ಯಾವುದೇ ಸಾಕ್ಷ್ಯಾಧಾರಗಳನ್ನು ಪ್ರಾಧಿಕಾರದ ಮುಂದೆ ಹಾಜರುಪಡಿಸಿ ಜಪ್ತುಗೊಳಿಸಿರುವ ನಾಡದೋಣಿಯಲ್ಲಿ ದೋಣಿಯ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆಯೆಂದು ಸಾಬೀತುಪಡಿಸಿರುವುದಿಲ್ಲ, ಈ ಜವಾಬ್ದಾರಿಯು ಮಾಲೀಕರದಾಗಿದ್ದು ಅವರು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.

ಈ ಕಾರಣದಿಂದ 2ನೇ ಅಂಶಕ್ಕೆ ನಕಾರಾತ್ಮಕವಾಗಿ ಇಲ್ಲ ಎಂದು ಪರಿಗಣಿಸಲಾಗಿದೆ.

ಈ ಮೇಲಿನ ಸಾಕ್ಷ್ಯಾಧಾರಗಳು ಹಾಗೂ ಹಾಜರುಪಡಿಸಿರುವ ದಾಖಲಾತಿಗಳನ್ನು ಪರಿಶೀಲಿಸಲಾಗಿ ದಿನಾಂಕ: 14.10.2001 ರಂದು ಜಪ್ತುಪಡಿಸಲಾಗಿರುವ ನಾಡ ದೋಣಿಯಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಣೆಯಾಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತುಗೊಂಡಿರುವುದರಿಂದ ಜಪ್ತುಪಡಿಸಿರುವ ನಾಡದೋಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಮನವರಿಕೆಯಾಗಿರುವುದರಿಂದ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ:152:ಡಿಟಿಸಿಆರ್: 2001-02, ದಿನಾಂಕ: 16ನೇ ಅಕ್ಟೋಬರ್ 2003**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ) ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರಲ್ಲಿ

ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ಉಪ ನಿರೀಕ್ಷಕರು, ಉಳ್ಳಾಲ ಉಪ ವಲಯ, ಉಳ್ಳಾಲ ಇವರ ಮೊಕದ್ದಮೆ ಸಂಖ್ಯೆ: 5/2001-02, ದಿನಾಂಕ: 14.10.2001 ರಲ್ಲಿ ವಶಪಡಿಸಿಕೊಂಡಿರುವ ನಾಡದೋಣಿಯನ್ನು ನಿಯಮ 43(ಎ)(2) ರನ್ವಯ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿ: 16.10.2003 ರಂದು ಶೀಘ್ರಲಿಪಿಗಾರರಿಗೆ ಉಖ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.: 1 - ಶ್ರೀ ಸೋಮಶೇಖರ, ಅಬಕಾರಿ ಉಪ ನಿರೀಕ್ಷಕರು, ಉಳ್ಳಾಲ ಉಪ ವಲಯ, ಉಳ್ಳಾಲ
ಪ್ರಾ.ಸಾ.: 2 - ಶ್ರೀ ದಿನಕರ ಅಬಕಾರಿ ರಕ್ಷಕ, ಉಳ್ಳಾಲ ವಲಯ, ಉಳ್ಳಾಲ

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ಮಹಜರು
ನಿಶಾನೆ ಪಿ-2 - ಪ್ರಥಮ ಮಾಹಿತಿ ವರದಿಯ ಪ್ರತಿ
ನಿಶಾನೆ ಪಿ-3 - ಕೆಮಿಕಲ್ ವರದಿ ಪ್ರತಿ

**ಅನುಬಂಧ-3**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

1) ಅರ್ಜಿದಾರರ ಹೇಳಿಕೆ - ಯಾವುದು ಇಲ್ಲ

**ಅನುಬಂಧ-4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು - ಇಲ್ಲ

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 1223

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ:552:ಡಿಟಿಸಿಆರ್:2002-03, ದಿನಾಂಕ: 6ನೇ ಅಕ್ಟೋಬರ್ 2003**

**ಉಪಸ್ಥಿತರು:** ಗೋವಿಂದಪ್ಪ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ವಿರುದ್ಧ** | **ಆರೋಪಿಗಳು** |
|---|---|---|
| ಅಬಕಾರಿ ನಿರೀಕ್ಷಕರು, ನಂ. 3, ಇ.ಐ.ಬಿ. ಮಂಗಳೂರು ವಿಭಾಗ, ಮಂಗಳೂರು | | 1. ಅಲೆಕ್ಸ್ (ಪ್ರಾಯ 31 ವರ್ಷ) ಬಿನ್ ಮ್ಯಾಥ್ಯೂ, ವರಪೂಳ್ಳಾ ಪೋಸ್ಟ್, ತೋರುಪೂಜ, ಇಡುಕಿ ಜಿಲ್ಲೆ, ಕೇರಳ-685504<br>2. ತೋಮಸ್ ಬಿನ್ ಸ್ಟೀಪ್ವನ್ (ಪ್ರಾ: 32 ವರ್ಷ) ವಾರ್ಡ್ ನಂಬರ್: 561, ವರಪೂಳ್ಳಾ ಪೋಸ್ಟ್, ತೋಡು ಪೂಜ, ಇಡುಕಿ ಜಿಲ್ಲೆ, ಕೇರಳ.<br>3. ಜೋನ್‌ಸನ್ ಜೋರ್ಜ್ ಬಿನ್ ಜೋರ್ಜ್, ಪ್ರೇಮಭಾವಾ ಹೌಸ್, ಯಶರಾಮ ಅಪಾರ್ಟ್‌ಮೆಂಟ್, ಪ್ಲಾಟ್ ನಂ. 7, ಪೆರಂಬೂರು- (ವಾಹನ ಮಾಲೀಕರು) |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 29.3.2003 ರಂದು ಅಬಕಾರಿ ನಿರೀಕ್ಷಕರು, ನಂ. 3, ಇ.ಐ.ಬಿ. ಮಂಗಳೂರು ವಿಭಾಗ, ಮಂಗಳೂರುರವರು ಮುಂಜಾನೆ 5.00 ಗಂಟೆ ಸಮಯದಲ್ಲಿ ತಮ್ಮ ಸಿಬ್ಬಂದಿ ಸಮೇತ ಮಂಗಳೂರು ನಗರದ ಬೈಕಂಪಾಡಿ ಹೊಸ ಮಾರ್ಕೆಟ್ ಯಾರ್ಡ್ ಮುಂಭಾಗದಲ್ಲಿ ರಸ್ತೆಗಾವಲು ನಡೆಸುತ್ತಿರುವಾಗ ಕೂಳೂರು ಕಡೆಯಿಂದ ಲಾರಿ ಸಂ: ಕೆಎಲ್-7 ಡಬ್ಲ್ಯೂ-4783 (ಟಾಟಾ 407) ರಲ್ಲಿ

ಆರೋಪಿಯು ಅಕ್ರಮವಾಗಿ ಯಾವುದೇ ರಹದಾರಿಯಿಲ್ಲದೇ 2100.00 ಲೀಟರು ಮದ್ಯಸಾರವನ್ನು ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆ ಹಚ್ಚಿ ಇದು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 11, 14(2) ರಂತೆ ರೀತ್ಯಾ ಉಲ್ಲಂಘನೆ ಹಾಗೂ ಕಲಂ 32, 34 ಮತ್ತು 38(ಎ) ರ ರೀತ್ಯಾ ಶಿಕ್ಷಾರ್ಹವಾಗಿರುವುದರಿಂದ ಸದರಿ ಆರೋಪಿಯ ವಿರುದ್ಧ ಮೊಕದ್ದಮೆ ಸಂ: 15/2002-03 ದಿ: 29.3.2003 ರಂದು ಮೊಕದ್ದಮೆಯನ್ನು ದಾಖಲೆ ಮಾಡಿರುತ್ತಾರೆ. ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯಸಾರ ಹಾಗೂ ಲಾರಿಯನ್ನು ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಕೂಳೂರು ವಲಯ ಇವರಿಗೆ ಈ ಪ್ರಾಧಿಕಾರದ ಅನುಮತಿಯ ಮೇರೆಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಗುಪ್ತ ವಾರ್ತಾದಳ ಮಂಗಳೂರು ವಿಭಾಗ ಇವರು ಪ್ರಕರಣದಲ್ಲಿ ವಶಪಡಿಸಿಕೊಂಡ ಮದ್ಯಸಾರದಿಂದ ತೆಗೆದ ಮಾದರಿಯನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ ರಾಸಾಯನಿಕ ತಜ್ಞರ ವರದಿಯನ್ನು ಪಡೆದು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಮದ್ಯಸಾರವು 66 ಡಿಗ್ರಿ ಓ.ಪಿ. ತೀಕ್ಷ್ಣತೆಯನ್ನು ಹೊಂದಿದ್ದು ಇದು ಮಾನವನ ಸೇವನೆಗೆ ಯೋಗ್ಯವಾಗಿರುವುದರಿಂದ ಜಪ್ತಿಗೊಳಿಸಿದ ಮದ್ಯಸಾರವನ್ನು ತಮ್ಮಲ್ಲಿ ಇಟ್ಟುಕೊಳ್ಳಲು ಸ್ಥಳಾವಕಾಶವಿಲ್ಲದಿರುವುದರಿಂದ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ನೀಡಿದ ಶಿಫಾರಸ್ಸಿನಂತೆ ಮದ್ಯಸಾರವನ್ನು ಈ ಪ್ರಾಧಿಕಾರದ ಆದೇಶ ಸಂ: ಎಸ್‌ಡಿಕೆ:552:ಡಿಟಿಸಿಆರ್: 2002-03 ದಿ: 19.5.2003 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸದರಿ ಮದ್ಯಸಾರವನ್ನು ಸಾರಾಯಿ ಸಂಸ್ಕರಣಾ ಘಟಕ, ಪಡೀಲ್, ಮಂಗಳೂರು ಇವರಿಗೆ ಸಾರಾಯಿ ತಯಾರಿಕೆಗಾಗಿ ಹಂಚಿಕೆ ಮಾಡಲಾಗಿರುತ್ತದೆ.

ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನದ ಮಾಲೀಕರ ಹೆಸರು ಮತ್ತು ವಿಳಾಸ ವಿವರಗಳನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಎರ್ನಾಕುಳಂ ಇವರಿಗೆ ಪತ್ರವನ್ನು ದಿ: 13.6.2003 ರಂದು ಬರೆಯಲಾಗಿದ್ದು ಸದರಿ ಪತ್ರಕ್ಕೆ ಈವರೆಗೂ ಉತ್ತರ ಬಂದಿರುವುದಿಲ್ಲ. ಸದರಿ ಪ್ರಕರಣವನ್ನು ಪತ್ತೆ ಹಚ್ಚುವಲ್ಲಿ ವಾಹನದಲ್ಲಿ ದೊರೆತಿರುವ ಆರ್.ಸಿ. ಪ್ರತಿಯಲ್ಲಿ ವಾಹನದ ಮಾಲೀಕನು ಜೋನ್‌ಸನ್ ಜೋರ್ಜ್ ಬಿನ್ ಜೋರ್ಜ್, ಪ್ರೇಮಭಾವಾ ಹೌಸ್, ಯಶರಾಮ ಅಪಾರ್ಟ್‌ಮೆಂಟ್, ಪ್ಲಾಟ್ ನಂ. 7, ಪೆರಂಬೂರು ಎಂಬುದಾಗಿದ್ದು ಈ ವಿಳಾಸಕ್ಕೆ ಕಾರಣ ಕೇಳಿ ನೋಟೀಸನ್ನು ಈ ಪ್ರಾಧಿಕಾರವು ದಿ: 13.6.2003 ರಂದು ನೀಡಲಾಗಿದ್ದು ಸದರಿ ನೋಟೀಸು ಜಾರಿಯಾಗದೇ ಹಿಂದೆ ಬಂದಿರುತ್ತದೆ. ಅಲ್ಲದೆ ಈ ಪ್ರಕರಣದ ಅಪರಾಧಿಗಳಾದ ಅಲೆಕ್ಸ್ ಬಿನ್ ಮ್ಯಾಥ್ಯೂ, ವರಪೂಳ್ಳಾ ಪೋಸ್ಟ್, ತೋರುಪೂಜ, ಇಡುಕಿ ಜಿಲ್ಲೆ, ಕೇರಳ-685504 ಮತ್ತು ತೋಮಸ್ ಬಿನ್ ಸ್ಟೀಫ್ಟನ್ (ಪ್ರಾ: 32 ವರ್ಷ) ವಾರ್ಡ್ ನಂಬರ್: 561, ವರಪೂಳ್ಳಾ ಪೋಸ್ಟ್, ತೋಡುಪೂಜ, ಇಡುಕಿ ಜಿಲ್ಲೆ, ಕೇರಳ ಇವರಿಗೂ ಕಾರಣ ಕೇಳಿ ನೋಟೀಸನ್ನು ಈ ಪ್ರಾಧಿಕಾರದಿಂದ ದಿ: 13.6.2003 ರಂದು ನೀಡಿದ್ದು ಈ ಎರಡು ನೋಟೀಸುಗಳು ಜಾರಿಯಾಗದೇ ಹಿಂದಕ್ಕೆ ಬಂದಿರುತ್ತದೆ.

ಸದರಿ ಪ್ರಕರಣವು ದಾಖಲಾಗಿ ಸುಮಾರು 7 ತಿಂಗಳು ಕಳೆದಿದ್ದರೂ ಜಪ್ತಿ ಪಡಿಸಿರುವ ವಾಹನ ತನ್ನದೆಂದು ಕೋರಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ದಾಖಲಾತಿಗಳೊಂದಿಗೆ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಮತ್ತು ಈ ಪ್ರಾಧಿಕಾರವು ನೀಡಿರುವ ಕಾರಣ ಕೇಳಿ ನೋಟೀಸುಗಳು ಜಾರಿಯಾಗದೇ ಹಿಂದಕ್ಕೆ ಬಂದಿರುತ್ತದೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲವಾದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸೊತ್ತುಗಳು ತಮ್ಮವೆಂದು ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43 (ಸಿ) ಅಡಿಯಲ್ಲಿ ಅಕ್ರಮ ಮದ್ಯವನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಆದರೆ ಈ ಪ್ರಕರಣವು ದಾಖಲಾಗಿ ಸುಮಾರು 7 ತಿಂಗಳು ಕಳೆದಿದ್ದರೂ ಈವರೆಗೂ ಯಾವುದೇ ವ್ಯಕ್ತಿಯು ವಾಹನವು ತನ್ನದೆಂದು ವಾಹನದ ಬಿಡುಗಡೆಗೆ ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ ಮತ್ತು ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಅಲ್ಲದೇ ಈ ಪ್ರಾಧಿಕಾರವು ನೀಡಲಾಗಿದ್ದ ಕಾರಣ ಕೇಳಿ ನೋಟೀಸುಗಳು ಸ್ವೀಕೃತಿಗೊಳ್ಳದೇ ಹಿಂದೆ ಬಂದಿರುವುದರಿಂದ ವಾಹನ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಈ ಅಕ್ರಮ ಸಾಗಾಣಿಕೆಯನ್ನು ಮಾಡುತ್ತಿದ್ದಾರೆ ಎಂಬುದು ವೇದ್ಯವಾಗಿರುತ್ತದೆ.

ಅಲ್ಲದೇ ದಿ: 29.3.2003 ರಂದು ಗುಪ್ತವಾರ್ತಾದಳ ಮಂಗಳೂರು ವಿಭಾಗದ ಅಬಕಾರಿ ನಿರೀಕ್ಷಕರು ಮಂಗಳೂರು ನಗರದ ಬೈಕಂಪಾಡಿ ಹೊಸ ಮಾರ್ಕೆಟ್‌ಯಾರ್ಡ್ ಮುಂಭಾಗದಲ್ಲಿ ಅಕ್ರಮವಾಗಿ ಸಾಗಾಣೆಯಾಗುತ್ತಿದ್ದ 2100.00 ಲೀಟರು ಮದ್ಯಸಾರವನ್ನು ಪತ್ತೆ ಹಚ್ಚಿ, ಮದ್ಯಸಾರವನ್ನು ಮತ್ತು ವಾಹನವನ್ನು ಸ್ಥಳ ಮಹಜರಿನೊಂದಿಗೆ ಜಪ್ತಿಪಡಿಸಿರುತ್ತಾರೆ. ಅಲ್ಲದೇ ರಾಸಾಯನಿಕ ತಜ್ಞರ ವರದಿಯಂತೆ ಜಪ್ತಿ ಪಡಿಸಿರುವ ವಸ್ತು ಮದ್ಯಸಾರವೆಂದು ದೃಢೀಕರಿಸಲ್ಪಟ್ಟಿರುತ್ತದೆ. ಈ ಮೇಲಿನ ವಿದ್ಯಾಮಾನಗಳಿಂದ ಮತ್ತು ಈ ಪ್ರಾಧಿಕಾರದ ಮುಂದೆ ಲಭ್ಯವಿರುವ ದಾಖಲೆ ಹಾಗೂ ಸಾಕ್ಷ್ಯಾಧಾರಗಳಿಂದ ಜಪ್ತಿಗೊಳಿಸಿರುವ ವಾಹನದಲ್ಲಿ ಅಕ್ರಮ ಮದ್ಯಸಾರವು ಸಾಗಾಣಿಕೆಯಾಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗಿರುತ್ತದೆ.

ಈ ಮೇಲಿನ ಅಂಶಗಳಿಂದ ಹಾಗೂ ದಾಖಲಾತಿಗಳ ಆಧಾರದಿಂದ ದಿ: 29.3.2003 ರಂದು ಲಾರಿ ಸಂ: ಕೆಎಲ್-7 ಡಬ್ಲ್ಯೂ 4783 ರಲ್ಲಿ ಅಕ್ರಮ ಮದ್ಯಸಾರವು ಸಾಗಾಣಿಕೆಯಾಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಭೀತಾಗಿರುತ್ತದೆ. ಸದರಿ ಪ್ರಕರಣವು ದಾಖಲೆಗೊಂಡು ಸುಮಾರು 7 ತಿಂಗಳು ಕಳೆದರೂ ಯಾವುದೇ ವ್ಯಕ್ತಿಯು ವಾಹನವನ್ನು ತನ್ನದೆಂದು ಕೋರಿ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದು ವಾಹನ ಮಾಲೀಕನು ತಾನು ತನ್ನ ತಿಳಿವಳಿಕೆಯಿಂದಲೇ ಈ ಅಕ್ರಮ ಕೃತ್ಯವು ನಡೆದಿದೆಯೆಂದು ಮತ್ತು ಈ ಪ್ರಕರಣವನ್ನು ನಡೆಸಲು ವಾಹನ ಮಾಲೀಕರಿಗೆ ಉತ್ಸಾಹವಿರುವುದಿಲ್ಲವೆಂದು ಈ ಪ್ರಾಧಿಕಾರವು ಭಾವಿಸಬೇಕಾಗುತ್ತದೆ.

ಈ ಮೇಲಿನ ಕಾರಣಗಳಿಂದಾಗಿ ಹಾಗೂ ಜಪ್ತುಪಡಿಸಲಾಗಿರುವ ವಾಹನವನ್ನು ತೆರೆದ ಜಾಗದಲ್ಲಿ ಇಟ್ಟಿರುವುದರಿಂದ ಮಳೆ ಬಿಸಿಲು, ಮುಂತಾದ ಹವಮಾನ ವೈಪರೀತ್ಯದಿಂದ ಹಾಳಾಗುವ ಸಾಧ್ಯತೆಗಳು ಇರುವುದರಿಂದ ಹಾಗೂ ಸರ್ಕಾರದ ಆದಾಯದ

ಹಿತದೃಷ್ಟಿಯಿಂದ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತ ಎಂದು ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಂಡು ಈ ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನ ಲಾರಿ ಸಂ: ಕೆಎಲ್-7 ಡಬ್ಲ್ಯೂ 4783 ನ್ನು ಕರ್ನಾಟಕ ಅಬಕಾರಿ ಕಾಯ್ದೆ 43(ಸಿ) ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಾಣಬರುವುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ) ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಸಿ) ರನ್ವಯ ಅಬಕಾರಿ ನಿರೀಕ್ಷಕರು, ನಂ. 3, ಇ.ಐ.ಬಿ. ಮಂಗಳೂರು ವಿಭಾಗ, ಮಂಗಳೂರು ಇವರ ಮೊಕದ್ದಮೆ ಸಂಖ್ಯೆ: 15/2002-03 ದಿನಾಂಕ: 29.3.2003 ರಲ್ಲಿ ವಶಪಡಿಸಿಕೊಂಡಿರುವ ವಾಹನ ಲಾರಿ ಸಂ: ಕೆಎಲ್-7 ಡಬ್ಲ್ಯೂ-4783 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿ: 6.10.2003 ರಂದು ಶೀಘ್ರಲಿಪಿಗಾರರಿಗೆ ಉಖ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 1224

## ಮಾನ್ಯ 5ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ

ಬಸವೇಶ್ವರನಗರ ಪೊಲೀಸ್ ಠಾಣೆಯ ಈ ಕೆಳಕಂಡ ಸೀಮಿಸ್‌ಗಳಲ್ಲಿ ವಾರಸುದಾರರಿಲ್ಲದೇ ಕೆಲವು ವಾಹನಗಳನ್ನು ವಶಪಡಿಸಿದ್ದು ವಾರಸುದಾರರನ್ನು ಪತ್ತೆ ಮಾಡುವ ಸಲುವಾಗಿ ಬೆಂಗಳೂರುನಗರ ಎಲ್ಲಾ ಪೊಲೀಸ್ ಠಾಣೆಗಳಿಗೆ ಸುತ್ತೋಲೆಯನ್ನು ಹೊರಡಿಸಿದ್ದು ವಾರಸುದಾರರು ಪತ್ತೆಯಾಗಿರುವುದಿಲ್ಲ. ವಾಹನಗಳನ್ನು ವಿಲೇವಾರಿ ಮಾಡುವ ಸಲುವಾಗಿ ಪ್ರಕಟಿಸಲಾಗಿದೆ.

| ಕ್ರ.ಸಂ. | ಸಿಮಿಸ್ ಸಂಖ್ಯೆ ಮೊ.ಸಂ. | ಮಾಲುಪಟ್ಟಿ ಸಂಖ್ಯೆ | ಮಾಲಿನ ವಿವರ |
|---|---|---|---|
| 1 | ಮೊ.ಸಂ. 241/99 | ಪಿ.ಎಫ್. 139/99 | ಒಂದು ಸುಜುಕಿ ಮ್ಯಾಕ್ಸ್-100 ಮೋಟಾರು ಸೈಕಲ್ ನಂ. ಟಿ.ಎನ್. 29 ವೈ. 4234, ಇಂಜಿನ್ ನಂ. 172ಎಂ981255, ಚಾಸಿಸ್ ನಂ. 1501ಎಫ್939706 |
| 2 | ಸಿಮಿಸ್ ನಂ. 1036/2001 | ಪಿ.ಎಫ್. ನಂ. 151/01 | ಒಂದು ಕೆಂಪು ಬಣ್ಣದ ಯಮಹಾ ಮೋಟಾರು ಸೈಕಲ್ ನಂ. ಕೆಎ 01-ಕ್ಯೂ 1477 ಚಾಸಿಸ್ 8 ಜೆಐಎಲ್ 5192201 ಇಂಜಿನ್ ನಂ. 93 ಜೆಇ 04407 |
| 3 | ಸಿಮಿಸ್ ನಂ. 1037/2001 | ಪಿ.ಎಫ್. ನಂ. 152/01 | ಒಂದು ತಿಳಿ ಕೆಂಪು ಬಣ್ಣದ ಎನ್ ಪೀಲ್ಡ್ ಮೋಟಾರು ಸೈಕಲ್ ನಂ. ಕೆಎ.02-ಜೆ-322 ಚಾಸಿಸ್ ನಂ. ಇರುವುದಿಲ್ಲ. ಇಂಜಿನ್ ನಂ. ಬಿ 120617/1ಹೆಚ್ |
| 4 | ಸಿಮಿಸ್ ನಂ. 1038/2001 | ಪಿ.ಎಫ್. ನಂ. 153/01 | ಒಂದು ಕಪ್ಪುಬಣ್ಣದ ಹೀರೋ ಹೋಂಡಾ ಮೋಟಾರು ಸೈಕಲ್ ನಂ. ಕೆಎ.08-ಹೆಚ್. 1478 ಚಾಸಿಸ್ 93 ಜೆ 0ಇ00699 ಇಂಜಿನ್ ನಂ. 93ಜೆಇ04407 |
| 5 | ಸಿಮಿಸ್ ನಂ. 584/2003 | ಪಿ.ಎಫ್. ನಂ. 87/03 | ಒಂದು ಹಸಿರು ಬಣ್ಣದ ಟಿ.ವಿ.ಎಸ್-50 ನಂ. ಸಿಕೆಇ-5933 ಇಂಜಿನ್ ನಂ. ಸಿ804ಎಂ024550 ಚಾಸಿಸ್ ನಂ. 0804ಎಫ್029717 |
| 6 | ಸಿಮಿಸ್ ನಂ. 585/2003 | ಪಿ.ಎಫ್. ನಂ. 88/03 | ಒಂದು ಹಸಿರು ಬಣ್ಣದ ಟಿ.ವಿ.ಎಸ್. ನಂ. ಸಿಎಐ-4289 ಇಂಜಿನ್ ನಂ. 0859910283 |
| 7 | ಸಿಮಿಸ್ ನಂ. 586/2003 | ಪಿ.ಎಫ್. ನಂ. 89/03 | ಒಂದು ಕಪ್ಪು ಬಣ್ಣದ ಟಿವಿಎಸ್-50 ನಂ. ಸಿಕೆಎಂ-7153 ಇಂಜಿನ್ ನಂ. 1472971187 ಚಾಸಿಸ್ ನಂ. 153287-12 |
| 8 | ಸಿಮಿಸ್ ನಂ. 595/2003 | ಪಿ.ಎಫ್. ನಂ. 92/2003 | ಒಂದು ಆಕಾಶ ಕಲರ್ ಬಜಾಜ್ ಚೇತಕ್ ನಂ. ಕೆಎ-02-ಆರ್-2315 ಇಂಜಿನ್ ನಂ. 06ಎಂ96ಎ69249 ಚಾಸಿಸ್ ನಂ. 06ಎಫ್96ಎ95898 |
| 9 | ಸಿಮಿಸ್ ನಂ. 596/2003 | ಪಿ.ಎಫ್. ನಂ. 93/03 | ಒಂದು ಬಿಳಿ ಬಣ್ಣದ ಕೆನೆಟಿಕ್ ಹೋಂಡಾ ನಂ. ಕೆಎ-03-ವಿ-9603 ಇಂಜಿನ್ ನಂ. 609951 ಹೆಚ್‌ಇಎಂಇ |

| ಕ್ರ.ಸಂ. | ಸಿಮಿಸ್ ಸಂಖ್ಯೆ ಮೊ.ಸಂ. | ಮಾಲುಪಟ್ಟಿ ಸಂಖ್ಯೆ | ಮಾಲಿನ ವಿವರ |
|---|---|---|---|
| 10 | ಸಿಮಿಸ್ ನಂ. 598/2003 | ಪಿ.ಎಫ್. ನಂ. 94/03 | ಒಂದು ಬ್ರೌನ್ ಕಲರ್ ಟಿವಿಎಸ್-50 ನಂ. ಕೆಎ-06-ಇ-1058<br>ಇಂಜಿನ್ ನಂ. ಎ001-ಎಂ.329285<br>ಚಾಸಿಸ್ ನಂ. ಎ002ಎಫ್ 351629 |
| 11 | ಸಿಮಿಸ್ ನಂ. 599/2003 | ಪಿ.ಎಫ್. ನಂ. 95/03 | ಒಂದು ಟಿವಿಎಸ್ ಮೊಪೆಡ್ ನಂ. ಸಿಕೆಎಂ-8832<br>ಇಂಜಿನ್ ನಂ. 167948-02-88<br>ಚಾಸಿಸ್ ನಂ. 16713302-88 |
| 12 | ಸಿಮಿಸ್ ನಂ. 615/2003 | ಪಿ.ಎಫ್. ನಂ. 96/03 | ಆರ್‌ಎಕ್ಸ್-100 ಯಮಹಾ ನಂ. ಕೆಎ-05-ಕ್ಯೂ-2675<br>ಇಂಜಿನ್ ನಂ. ಐಎಲ್‌ಐ 277615<br>ಚಾಸಿಸ್ ನಂ. ಐಎಲ್‌ಐ 41084018+-9 |
| 13 | ಸಿಮಿಸ್ ನಂ. 616/2003 | ಪಿ.ಎಫ್. ನಂ. 97/03 | ಒಂದು ಬಜಾಜ್ ಚೇತಕ್ ನಂ. ಕೆಎ-05-ಕ್ಯೂ-5330<br>ಇಂಜಿನ್ ನಂ. 06ಎಂ95ಸಿ94694<br>ಚಾಸಿಸ್ ನಂ. 06ಎಫ್95ಸಿ15198 |
| 14 | ಸಿಮಿಸ್ ನಂ. 617/2003 | ಪಿ.ಎಫ್. ನಂ. 98/03 | ಒಂದು ಕವಾಸಕಿ ಬಜಾಜ್ ನಂ. ಸಿಕೆಆರ್-8536<br>ಇಂಜಿನ್ ನಂ. ಐಎಲ್‌ಐ-277615<br>ಚಾಸಿಸ್ ನಂ. 30ಸಿ046596 |
| 15 | ಸಿಮಿಸ್ ನಂ. 646/2003 | ಪಿ.ಎಫ್. ನಂ. 103/03 | ಒಂದು ಟಿಎಫ್‌ಆರ್ ಲೂನಾ ನಂ. ಸಿಎನ್‌ಯು-5127<br>ಇಂಜಿನ್ ಮತ್ತು ಚಾಸಿಸ್ ನಂ. ಉಜ್ಜಿದ್ದು ಕಾಣಿಸುವುದಿಲ್ಲ. |
| 16 | ಸಿಮಿಸ್ ನಂ. 647/2003 | ಪಿ.ಎಫ್. ನಂ. 104/03 | ಒಂದು ಟಿಎಫ್‌ಆರ್ ಲೂನಾ ನಂ. ಸಿ.ಕೆ.ಡಿ. 1871<br>ಇಂಜಿನ್ ಮತ್ತು ಚಾಸಿಸ್ ನಂ. ಉಜ್ಜಿದ್ದು ಕಾಣಿಸುವುದಿಲ್ಲ. |

ಠಾಣಾಧಿಕಾರಿ

ಪಿ.ಆರ್. 1225

ಬಸವೇಶ್ವರನಗರ ಪೊಲೀಸ್ ಸ್ಟೇಷನ್,
ಬೆಂಗಳೂರು-560 079.

## ಪೊಲೀಸ್ ಆಯುಕ್ತರವರ ಕಛೇರಿ, ಬೆಂಗಳೂರು ನಗರ

## ಅಧಿಸೂಚನೆ

### ಸಂಖ್ಯೆ: 295/ಸಂ-ಯೋ/ಸಿಓಪಿ/2003, ದಿನಾಂಕ: 16ನೇ ಅಕ್ಟೋಬರ್ 2003

ದಿನಾಂಕ: 26.5.2003 ರಂದು ಈ ಕಛೇರಿಯ ಪತ್ರ ಸಂಖ್ಯೆ: 295/ಸಂ/ಯೋ/ಸಿಓಪಿ/2003 ರಲ್ಲಿ ಆದೇಶಿಸಲಾದ ಅಧಿಸೂಚನೆಯಲ್ಲಿ ಬಸವೇಶ್ವರನಗರದ ಮೋದಿ ಆಸ್ಪತ್ರೆ ರಸ್ತೆಯಲ್ಲಿ ಡಾ: ಎಂ.ಸಿ. ಮೋದಿ ಜಂಕ್ಷನ್‌ನಿಂದ ಶಂಕರ್ ಮಠದ ವರೆಗೆ 'ಸಮ ಮತ್ತು ಬೆಸ' ದಿನಾಂಕಗಳಂದು ರಸ್ತೆಯ ಒಂದು ಬದಿಗೆ ದಿನಾಂಕ: 17.9.2003 ರಿಂದ ದಿನಾಂಕ: 16.10.2003 ರವರೆಗೆ ಪ್ರಾಯೋಗಿಕವಾಗಿ ನಿಲುಗಡೆ ಮಾಡಲು ಆದೇಶಿಸಲಾಗಿತ್ತು.

ಅಂತೆಯೇ ಈ ಮೇಲ್ಕಂಡ ವ್ಯವಸ್ಥೆ ಸಾರ್ವಜನಿಕರಿಗೆ ಅನುಕೂಲವಾಗಿದ್ದು, ರಸ್ತೆಯ ಎರಡು ಕಡೆ ಇರುವ ವಾಣಿಜ್ಯ ವಹಿವಾಟಿನವರು ಮತ್ತು ಇತರೆ ಸಂಘ ಸಂಸ್ಥೆಗಳು ಸಾರ್ವಜನಿಕರು ಮೋದಿ ರಸ್ತೆಯಲ್ಲಿ ದಿನಾಂಕ: 17.9.2003 ರಿಂದ ದಿ: 16.10.2003 ರವರೆಗೆ ಪ್ರಾಯೋಗಿಕವಾಗಿ 'ಸಮ ಹಾಗೂ ಬೆಸ' ದಿನಾಂಕಗಳಂದು ವಾಹನಗಳ ನಿಲುಗಡೆ ವ್ಯವಸ್ಥೆ ಮಾಡಿರುವುದನ್ನು ಸಮರ್ಥಿಸಿ, ಈ ವ್ಯವಸ್ಥೆಯನ್ನು ಮುಂದುವರಿಸಲು ಸಲಹೆಯನ್ನು ನೀಡಿರುತ್ತಾರೆ.

ಅಂತೆಯೇ ಸಂಚಾರ ತಜ್ಞರು ಸಹ 'ಸಮ ಹಾಗೂ ಬೆಸ' ದಿನಾಂಕಗಳಂದು ನಿಲುಗಡೆ ವ್ಯವಸ್ಥೆ ಸರಿಯಾಗಿದ್ದು, ಅದನ್ನೇ ಮುಂದುವರೆಸುವಂತೆ ಅಭಿಪ್ರಾಯಪಟ್ಟಿರುತ್ತಾರೆ.

ಅಂತೆಯೇ ಕಲಂ 115 ಮೋಟಾರು ವಾಹನ ಕಾಯ್ದೆ 1988 ಕಲಂ 03 ಕರ್ನಾಟಕ ಸಂಚಾರ ನಿಯಂತ್ರಣ ಕಾಯ್ದೆ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐಪಿಎಸ್, ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಆದ ನಾನು ಈ ಕೆಳಕಂಡ ಆದೇಶವನ್ನು ನೀಡುತ್ತಿದ್ದೇನೆ.

"ಬಸವೇಶ್ವರನಗರದ ಮೋದಿ ಆಸ್ಪತ್ರೆ ರಸ್ತೆಯಲ್ಲಿ ಮೋದಿ ಜಂಕ್ಷನ್‌ನಿಂದ ಶಂಕರ್ ಮಠ ಜಂಕ್ಷನ್‌ವರೆಗೆ ಸಮ ಹಾಗೂ ಬೆಸ ದಿನಾಂಕಗಳಂದು ರಸ್ತೆಯ ಒಂದೊಂದು ಬದಿಗೆ ದಿನಾಂಕ: 16.10.2003 ರಿಂದ ವಾಹನಗಳ ನಿಲುಗಡೆ ಮಾಡಲು ಆದೇಶಿಸಲಾಗಿದೆ".

ಅಂತೆಯೇ 1988 ಮೋಟಾರು ವಾಹನ ಕಾಯ್ದೆ ಕಲಂ 116 ಹಾಗೂ 1960ರ ಕರ್ನಾಟಕ ಸಂಚಾರ ನಿಯಂತ್ರಣ ಕಾಯ್ದೆ ಕಲಂ 04 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ 16ನೇ ಅಕ್ಟೋಬರ್ 2003 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್. 1226 ಪೊಲೀಸ್ ಆಯುಕ್ತರು, ಬೆಂಗಳೂರು ನಗರ.

## ಪೊಲೀಸ್ ಕಮೀಷನ್‌ರವರ ಕಛೇರಿ, ಬೆಂಗಳೂರು ನಗರ

## ಅಧಿಸೂಚನೆ

### ಸಂಖ್ಯೆ: 592/ಸಂವಿ/ಸಿಓಪಿ/2003, ದಿನಾಂಕ: 23ನೇ ಅಕ್ಟೋಬರ್ 2003

ಬೆಂಗಳೂರು ನಗರದ ಮಲ್ಲೇಶ್ವರಂ ಸಂಪಿಗೆ ರಸ್ತೆಯಲ್ಲಿ ಮಲ್ಲೇಶ್ವರಂ 18ನೇ ಅಡ್ಡ ರಸ್ತೆ ಜಂಕ್ಷನ್‌ನಿಂದ ಟಿ. ಚೌಡಯ್ಯ ರಸ್ತೆ ಜಂಕ್ಷನ್‌ರವರೆಗೆ 230 ಅಡಿ ದ್ವಿಮುಖ ವಾಹನ ಸಂಚಾರದ ವ್ಯವಸ್ಥೆ ಇದ್ದು, ವಾಹನ ಸಂಚಾರ ಮತ್ತು ಪಾದಚಾರಿಗಳ ಓಡಾಟ ಅತ್ಯಧಿಕವಾಗಿರುವುದರಿಂದ ಸಾರ್ವಜನಿಕರ ಸುರಕ್ಷತೆ ಹಾಗೂ ಸುಗಮ ವಾಹನ ಸಂಚಾರದ ಹಿತದೃಷ್ಟಿಯಿಂದ ಸಂಪಿಗೆ ರಸ್ತೆಯಲ್ಲಿ ಮಿಲ್ ಕಾರ್ನರ್ ಜಂಕ್ಷನ್‌ನಿಂದ ಮಲ್ಲೇಶ್ವರಂ 18ನೇ ಅಡ್ಡ ರಸ್ತೆ ಜಂಕ್ಷನ್‌ವರೆಗೆ ದಕ್ಷಿಣದಿಂದ ಉತ್ತರಕ್ಕೆ ಇರುವ ಏಕಮುಖ ಸಂಚಾರದ ವ್ಯವಸ್ಥೆಯನ್ನು ಟಿ. ಚೌಡಯ್ಯ ರಸ್ತೆ ಜಂಕ್ಷನ್‌ವರೆಗೆ ವಿಸ್ತರಿಸುವುದು ಅವಶ್ಯಕವೆಂದು ಕಂಡು ಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರು ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡ ಸಂಚಾರ ನಿರ್ಬಂಧಗಳನ್ನು ಆದೇಶಿಸಿರುತ್ತೇನೆ.

ಸಂಪಿಗೆ ರಸ್ತೆ ಮಿಲ್ ಕಾರ್ನರ್ ಜಂಕ್ಷನ್‌ನಿಂದ ಮಲ್ಲೇಶ್ವರಂ 18ನೇ ಅಡ್ಡ ರಸ್ತೆ ಜಂಕ್ಷನ್‌ವರೆಗೆ ದಕ್ಷಿಣದಿಂದ ಉತ್ತರಕ್ಕೆ ಬರುವ ಎಲ್ಲಾ ಮಾದರಿ ವಾಹನ ಸಂಚಾರವನ್ನು ಟಿ. ಚೌಡಯ್ಯ ರಸ್ತೆ ಜಂಕ್ಷನ್‌ವರೆಗೆ ವಿಸ್ತರಿಸಿ ಸಂಪಿಗೆ ರಸ್ತೆಯಲ್ಲಿ ಟಿ. ಚೌಡಯ್ಯ ರಸ್ತೆ ಜಂಕ್ಷನ್‌ನಿಂದ ಮಿಲ್ ಕಾರ್ನರ್ ಜಂಕ್ಷನ್‌ವರೆಗೆ ಉತ್ತರದಿಂದ ದಕ್ಷಿಣಕ್ಕೆ ಬರುವ ಎಲ್ಲಾ ಮಾದರಿ ವಾಹನ ಸಂಚಾರವನ್ನು ನಿರ್ಬಂಧಿಸಲಾಗಿದೆ.

ಅಂತೆಯೇ 1988ನೇ ಮೋಟಾರು ವಾಹನ ಕಾಯ್ದೆ ಕಲಂ 116 ಹಾಗೂ 1960ನೇ ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ ಕಲಂ 4 ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಈ ನಿರ್ಬಂಧನೆಯನ್ನು ಜಾರಿಗೊಳಿಸಲು ಅಗತ್ಯವಾದ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 23.10.2003 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್. 1227 ಪೊಲೀಸ್ ಆಯುಕ್ತರು, ಬೆಂಗಳೂರು ನಗರ.

## 7ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ನಗರ

### ದಿನಾಂಕ: 4ನೇ ನವೆಂಬರ್ 2003

ಬೆಂಗಳೂರು ನಗರದ ಶ್ರೀರಾಮಪುರ ಪೊಲೀಸ್ ಠಾಣೆಯಲ್ಲಿ ಈ ಕೆಳಗೆ ನಮೂದಿಸಿರುವ ವಾಹನಗಳಿಗೆ ವಾರಸುದಾರರು ಪತ್ತೆಯಾಗಿರುವುದಿಲ್ಲ. ಆದ್ದರಿಂದ ಪ್ರಕಟಣೆಗೊಳಿಸಿದ ತೊಂಭತ್ತು ದಿವಸಗಳಲ್ಲಿ ವಾಹನದ ಮಾಲೀಕರು ಸಂಬಂಧಪಟ್ಟ ಮೂಲ ದಾಖಲೆಗಳೊಂದಿಗೆ ಶ್ರೀರಾಮಪುರ ಪೊಲೀಸ್ ಠಾಣೆಯ ಠಾಣಾಧಿಕಾರಿಗಳನ್ನು ಭೇಟಿ ಮಾಡತಕ್ಕದ್ದು. ಇಲ್ಲದ ಪಕ್ಷದಲ್ಲಿ ಸಾರ್ವಜನಿಕ ಬಹಿರಂಗ ಹರಾಜು ಹಾಕಲಾಗುವುದು.

**ವಾಹನಗಳ ವಿವರಗಳು ಈ ಕೆಳಕಂಡಂತೆ ಇರುತ್ತವೆ**

| ಕ್ರ.ಸಂ. | ಮೊಕದ್ದಮೆ ನಂ. ಸಿಮಿಸ್ ನಂಬರ್ | ಮಾಲು ಪಟ್ಟಿ ಸಂಖ್ಯೆ ಮತ್ತು ದಿನಾಂಕ | ವಾಹನಗಳ ವಿವರಗಳು |
|---|---|---|---|
| 1 | ಸಿಮಿಸ್ ನಂ. 506:00 | 79:2000, 20.07.2000 | 1. ಒಂದು ಲ್ಯಾಂಬಿ ಸ್ಕೂಟರ್ ಕೆಎ-03-ಜೆ-396 2. ಒಂದು ಹೀರೋ ಪುಚ್ ಮೊಪೆಡ್ ಕೆಎ-02-ಇ-3007 |
| 2 | ಸಿಮಿಸ್ ನಂ. 507:00 | 80:2000 20.7.2000 | ಒಂದು ಟಿವಿಎಸ್ ಎಸ್‌ಟಿ (ಓಡಿಸುವ ಸ್ಥಿತಿಯಲ್ಲಿ ಇಲ್ಲ) ನಂ. ಟಿಎಸ್‌ಎ 2653 |
| 3 | ಸಿಮಿಸ್ ನಂ. 508:00 | 81:00 20.7.2000 | ಒಂದು ಹೀರೋ ಪುಚ್ (ಓಡಿಸುವ ಸ್ಥಿತಿಯಲ್ಲಿ ಇರುವುದಿಲ್ಲ) ನಂ. ಕೆಎ-05-ಜಿ-2808 |
| 4 | ಸಿಮಿಸ್ ನಂ. 509:00 | 82:00 20.7.2000 | ಒಂದು ಲೂನಾ ಮೊಪೆಡ್ (ಓಡಿಸುವ ಸ್ಥಿತಿಯಲ್ಲಿ ಇರುವುದಿಲ್ಲ) ಕೆಎ-02-ಹೆಚ್-1602 |
| 5 | ಸಿಮಿಸ್ ನಂ. 510:00 | 83:00 20.7.2000 | ಒಂದು ಲೂನಾ ಮೊಪೆಡ್ (ಓಡಿಸುವ ಸ್ಥಿತಿಯಲ್ಲಿ ಇರುವುದಿಲ್ಲ) ಟಿಎಂಇ 3487 |
| 6 | ಸಿಮಿಸ್ ನಂ. 537:03 | 73:03 31.7.2003 | ಒಂದು ಟಿವಿಎಸ್-50 ಎಕ್ಸ್‌ಎಲ್ ನಂ. ಸಿಕೆಐ 335, ಇಂಜಿನ್ ನಂ.420911 ಚಾರ್ಸಿ ನಂ.402568 ಯು 86 |

| ಕ್ರ.ಸಂ. | ಮೊಕದ್ದಮೆ ನಂ. ಸಿಮಿಸ್ ನಂಬರ್ | ಮಾಲು ಪಟ್ಟಿ ಸಂಖ್ಯೆ ಮತ್ತು ದಿನಾಂಕ | ವಾಹನಗಳ ವಿವರಗಳು |
|---|---|---|---|
| 7 | ಸಿಮಿಸ್ ನಂ. 540:03 | 75:03<br>2.8.2003 | 1. ಒಂದು ಟಿವಿಎಸ್ ಮೊಪೆಡ್ ಹಸಿರು ಬಣ್ಣದ್ದು ಕೆಎ-05-ಕೆ-528<br>ಇಂಜಿನ್ ನಂ. ಎ-302-ಎಂ- 719093<br>ಚಾರ್ಸಿ ನಂ. ಎ-302-ಎಫ್-722525<br>2. ಒಂದು ಟಿವಿಎಸ್ 50 ಎಕ್ಸ್ಎಲ್ ಹಸಿರು ಬಣ್ಣದ್ದು ಸಿಕೆಕ್ಯೂ 8861 ಇಂಜಿನ್ ನಂ. 518664-12-87<br>ಚಾರ್ಸಿ ನಂ. 517839-12-87 |
| 8 | ಸಿಮಿಸ್ ನಂ. 543:03 | 76:03<br>3.8.2003 | ಒಂದು ಟಿವಿಎಸ್ 50 ಮೊಪೆಡ್ ಸಿಕೆಐ 1891<br>ಇಂಜಿನ್ ನಂ. 442881-6-86<br>ಚಾರ್ಸಿ ನಂ. 442648-6-86 |
| 9 | ಸಿಮಿಸ್ ನಂ. 545:03 | 77:03<br>3.8.2003 | ಒಂದು ಲೂನಾ ಮೊಪೆಡ್ ನಂ. ಸಿಎಎಸ್ 7527<br>ಇಂಜಿನ್ ನಂ. ಕೆಇ-483040<br>ಚಾರ್ಸಿ ನಂ. ಕಾಣೆಸುತ್ತಿಲ್ಲ. |
| 10 | ಸಿಮಿಸ್ ನಂ. 555:03 | 79:03<br>6.8.2003 | ಒಂದು ಹೀರೋ ಫುಚ್ ಮೊಪೆಡ್ ಕೆಎ-05-ಹೆಚ್-7314 ಇಂಜಿನ್ ನಂ. 938310<br>ಚಾರ್ಸಿ ನಂ. ಸಿಎ-94273 |
| 11 | ಸಿಮಿಸ್ ನಂ. 557:03 | 81:03<br>7.8.2003 | ಒಂದು ಸ್ಕೂಟರ್ ನಂ. ಎಂಇಕ್ಯೂ 5852<br>ಇಂಜಿನ್ ನಂ. 03ಇ-304-086617<br>ಚಾರ್ಸಿ ನಂ. ಕಾಣೆಸುತ್ತಿಲ್ಲ |
| 12 | ಸಿಮಿಸ್ ನಂ. 558:03 | 82:03<br>7.8.2003 | ಒಂದು ಲೂನಾ ಮೊಪೆಡ್ ನಂ. ಸಿಎಒ 8376<br>ಇಂಜಿನ್ ನಂ. ಕೆಎಲ್ಒ 95-998<br>ಚಾರ್ಸಿ ನಂ. ಕಾಣೆಸುತ್ತಿಲ್ಲ |
| 13 | ಸಿಮಿಸ್ ನಂ. 567:03 | 83:03<br>7.8.2003 | ಒಂದು ಸ್ಕೂಟರ್ ಎಂಇಒ 1720<br>ಇಂಜಿನ್ ನಂ. 03ಬಿ-401-120384 |
| 14 | ಸಿಮಿಸ್ ನಂ. 568:03 | 84:03<br>9.8.2003 | ಒಂದು ಸ್ಕೂಟರ್ ಸಿಎಟಿ 065<br>ಇಂಜಿನ್ ನಂ. 61701 |
| 15 | ಸಿಮಿಸ್ ನಂ. 576:03 | 85:03<br>12.8.2003 | ಒಂದು ಟಿವಿಎಸ್ ಎಕ್ಸ್ಎಲ್ ನಂ. ಕೆಎ-02-ಜಿ-5442<br>ಇಂಜಿನ್ ನಂ. ಎ-209-ಎಂ-672264<br>ಚಾರ್ಸಿ ನಂ. ಎ-209-ಎಫ್-674550 |
| 16 | ಸಿಮಿಸ್ ನಂ. 577:03 | 86:03<br>12.8.2003 | ಒಂದು ಸ್ಕೂಟರ್ ನಂ. ಕೆಎ-02-ಎಲ್-8223<br>ಇಂಜಿನ್ ನಂ. 65568<br>ಚಾರ್ಸಿ ನಂ. 06 ಎಫ್-95ಎ-89961 |
| 17 | ಸಿಮಿಸ್ ನಂ. 582:03 | 88:03<br>13.8.2003 | ಒಂದು ಬಜಾಜ್ ಚೇತಕ್ ಸ್ಕೂಟರ್<br>ನಂ. ಕೆಎ-04-ಇ-7305 |

ಠಾಣಾಧಿಕಾರಿ
ಪಿ.ಆರ್. 1232 ಶ್ರೀರಾಮಪುರ ಪೊಲೀಸ್ ಸ್ಟೇಷನ್,
ಬೆಂಗಳೂರು

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

**ಪ್ರಕರಣ ಸಂಖ್ಯೆ: ಕಾಪಕ:ಕಸ-74:2003, ದಿನಾಂಕ: 27ನೇ ಅಕ್ಟೋಬರ್ 2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಅರ್ಜಿದಾರರು:

1. ಗಂಗಮ್ಮ ಕೋಂ ಬಸವರಾಜ ಹೊರಬೈಲು ಗ್ರಾಮ, ಚೊರಡಿ ಅಂಚೆ, ಶಿವಮೊಗ್ಗ

ಪ್ರತಿವಾದಿಗಳು:

1. ಅಣ್ಣಪ್ಪ ಬಿನ್ ಚಿಕ್ಕಮುನಿಯಪ್ಪ, ಹೊಸ ಅನಂದೂರು ಗ್ರಾಮ, ಶ್ರೀರಂಗಪಟ್ಟಣ
2. ಸಿ. ತೀರ್ಥಪ್ಪ ಬಿನ್ ಚೌಡಯ್ಯ ನಾಯ್ಕ ಲಾರಿ ಮಾಲೀಕರು ನಂಜುವಳ್ಳಿ ಗ್ರಾಮ ಹೊಸನಗರ ತಾ:
3. ದಿ ನ್ಯೂ ಇಂಡಿಯಾ ಇನ್ಸೂರೆನ್ಸ್ ಕಂ.ಲಿ. ಬಿ.ಹೆಚ್. ರಸ್ತೆ ಶಿವಮೊಗ್ಗ

## ಪ್ರಕಟಣೆ

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದು ಏನೆಂದರೆ, ಮೃತ ರಾಮು ರವರು ಪ್ರತಿವಾದಿಯವರಲ್ಲಿ ಕ್ಲೀನರ್ ಆಗಿ ಕೆಲಸದ ಮೇಲೆ ಇದ್ದಾಗ 23.5.2003 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 1.10.2003 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದು ಏನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ, ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್. 1212 ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಲೋಕೋಪಯೋಗಿ ಇಲಾಖೆ

### ಎಕ್ಸಿಕ್ಯೂಟಿವ್ ಇಂಜನಿಯರ್‌ರವರ ಕಛೇರಿ, ಪಿ.ಡಬ್ಲ್ಯೂ.ಡಿ., ಮಂಗಳೂರು ವಿಭಾಗ, ಮಂಗಳೂರು-575001, ದಕ್ಷಿಣ ಕನ್ನಡ

## ಪ್ರಕಟಣೆ

**ಕ್ರಮಾಂಕ: ಕಾನಿಅ:ಲೋಇ:ಆರ್‌ಎಸ್:128:2003-04, ದಿನಾಂಕ: 31ನೇ ಅಕ್ಟೋಬರ್ 2003**

**ವಿಷಯ:** ಕರ್ನಾಟಕ ರಾಜ್ಯ ಹೆದ್ದಾರಿ ಕಾಯ್ದೆ 1964ರ ಅಧಿನಿಯಮ 7(1) ರಂತೆ ರಾಜ್ಯ ಹೆದ್ದಾರಿಗಳು ಹಾದು ಹೋಗುವ ನಗರ:ಪಟ್ಟಣ:ಗ್ರಾಮಗಳ ಪರಿಮಿತಿ ಹಾಗೂ ಇತರೆ "ಆಕ್ಷೇಪಿತ ಪ್ರದೇಶಗಳಿಗೆ" ಅನ್ವಯವಾಗುವಂತೆ "ರಾಜ್ಯ ಹೆದ್ದಾರಿ ಗಡಿ ಮತ್ತು ಕಟ್ಟಡ ರೇಖೆ" ನಿಗದಿಪಡಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ:44:ಸಿಆರ್‌ಎಂ:99: ಬೆಂಗಳೂರು: ದಿನಾಂಕ: 16.11.2002.
2) ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ:362:ಸಿಆರ್‌ಎಂ:ಬೆಂಗಳೂರು ದಿನಾಂಕ: 9.10.1998.

ರಾಜ್ಯ ಸರ್ಕಾರದ ಆದೇಶ ದಿನಾಂಕ: 16.11.2002 ರಲ್ಲಿ ನಗರ:ಪಟ್ಟಣ:ಗ್ರಾಮಗಳ ಪರಿಮಿತಿ ಹಾಗೂ ಇತರೆ "ಆಕ್ಷೇಪಿತ ಪ್ರದೇಶ" ಗಳಲ್ಲಿ ಕರ್ನಾಟಕ ರಾಜ್ಯ ಹೆದ್ದಾರಿ ಕಾಯ್ದೆ 1964ರ ಅಧಿನಿಯಮ 7(4) ರನ್ವಯ ರಾಜ್ಯ ಹೆದ್ದಾರಿಗಳಲ್ಲಿ "ಗಡಿ ರೇಖೆ" ಮತ್ತು "ಕಟ್ಟಡ ರೇಖೆ" ಯನ್ನು ಈ ಕೆಳಗೆ ನಮೂದಿಸಿರುವ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಾದು ಹೋಗುವ 6 ರಾಜ್ಯ ಹೆದ್ದಾರಿಗಳಿಗೆ ನಿಗದಿಪಡಿಸಿ ಪ್ರಕಟಿಸಬೇಕಾಗಿರುತ್ತದೆ.

| ಕ್ರ.ಸಂ. | ರಾಜ್ಯ ಹೆದ್ದಾರಿ ಸಂಖ್ಯೆ | ರಾಜ್ಯ ಹೆದ್ದಾರಿ ಹೆಸರು | ಒಟ್ಟು ದೂರ (ಕಿ.ಮೀ. ಗಳಲ್ಲಿ) |
|---|---|---|---|
| 1 | 64ಎ | ಬೆಳ್ತಂಗಡಿ-ಮೂಡಬಿದ್ರೆ-ಮೂಲ್ಕಿ | 0.00 - 57.65 |
| 2 | 88ಸಿ | ಕಲ್ಲಡ್ಕ-ಕಾಂಞಗಾಡ್ | 0.00 - 22.80 |
| 3 | 64 | ಕಡೂರು-ಬಂಟ್ವಾಳ | 99.27 - 165.80 |
| 4 | 88 | ಮೈಸೂರು-ಬಂಟ್ವಾಳ | 148.50 - 220.40 |
| 5 | 37 | ಸುಬ್ರಹ್ಮಣ್ಯ-ಧರ್ಮಸ್ಥಳ-ಬೆಳ್ತಂಗಡಿ-ಕಾರ್ಕಳ-ಉಡುಪಿ | 0.00 - 82.40 |
| 6 | 66ಎ | ಮಂಗಳೂರು-ಬಜಪೆ-ಕಟೀಲು-ಬೆಳ್ಮಣ್ಣೆ | 0.00-30.80+0.90 (ಬೈಪಾಸ್) |

ರಾಜ್ಯ ಹೆದ್ದಾರಿಯ ದಾಖಲಿತ "ರಸ್ತೆ ಭೂಗಡಿಯ" ಅಂಚಿನಿಂದ ಕಟ್ಟಡ ರೇಖೆಯ ಅಂತರ

| | | ಅಂತರ |
|---|---|---|
| 1. | ಸಿಟಿಕಾರ್ಪೊರೇಷನ್ ಪರಿಮಿತಿ : ಸಿಟಿ ಮುನ್ಸಿಪಲ್ ಕೌನ್ಸಿಲ್ ಪರಿಮಿತಿ : ಟೌನ್ ಮುನ್ಸಿಪಲ್ ಕೌನ್ಸಿಲ್ ಪರಿಮಿತಿ : ಟೌನ್ ಪಂಚಾಯತ್ ಪರಿಮಿತಿ : ಗ್ರಾಮ ಪಂಚಾಯತ್ ಪರಿಮಿತಿಯಲ್ಲಿ | -6 ಮೀಟರ್ |
| 2. | ಸಿಟಿ ಕಾರ್ಪೊರೇಷನ್ ಪರಿಮಿತಿಯಿಂದ 15 ಕಿ.ಮೀ. ದೂರದವರೆಗೆ | -12 ಮೀಟರ್ |
| 3. | ಸಿಟಿ ಮುನ್ಸಿಪಲ್ ಕೌನ್ಸಿಲ್ ಪರಿಮಿತಿಯಿಂದ 10 ಕಿ.ಮೀ. ದೂರದವರೆಗೆ | -12 ಮೀಟರ್ |
| 4. | ಟೌನ್ ಮುನ್ಸಿಪಲ್ ಕೌನ್ಸಿಲ್ ಪರಿಮಿತಿ : ಟೌನ್ ಪಂಚಾಯತ್ ಪರಿಮಿತಿ : ಗ್ರಾಮ ಪಂಚಾಯತ್ ಪರಿಮಿತಿಯಿಂದ 5 ಕಿ.ಮೀ. ದೂರದವರೆಗೆ | -12 ಮೀಟರ್ |

ಮುಂದುವರಿಸುತ್ತಾ, ನಗರ : ಪಟ್ಟಣ : ಗ್ರಾಮಗಳ ಪರಿಮಿತಿ ಹಾಗೂ ಇತರೆ "ಆಕ್ಷೇಪಿತ ಪ್ರದೇಶಗಳಿಗೆ" ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಾದು ಹೋಗುವ ರಾಜ್ಯ ಹೆದ್ದಾರಿ ಪ್ರದೇಶಗಳಿಗೆ "ರಸ್ತೆಯ ಗಡಿ ರೇಖೆ" ಹಾಗೂ "ಕಟ್ಟಡ ರೇಖೆ" ನಿಗದಿಪಡಿಸಿ ಹಾಗೂ ಸೆಕ್ಷನ್ 8 ರಂತೆ ಸದ್ರಿ ರಸ್ತೆಗಳ ನಕ್ಷೆ ತಯಾರಿಸಲಾಗಿದೆ. ಇದರ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಜಿಲ್ಲೆಯ ಹೆದ್ದಾರಿ ಪ್ರಾಧಿಕಾರ ಹಾಗೂ ಕಾರ್ಯಪಾಲಕ ಇಂಜಿನಿಯರರು, ಲೋಕೋಪಯೋಗಿ ಇಲಾಖೆ, ಮಂಗಳೂರು ವಿಭಾಗ, ಮಂಗಳೂರುರವರ ಕಛೇರಿಯಲ್ಲಿ ಪಡೆಯಬಹುದಾಗಿದೆ.

ರಾಜ್ಯ ಹೆದ್ದಾರಿ ಪ್ರಾಧಿಕಾರಿ ಹಾಗೂ
ಕಾರ್ಯಪಾಲಕ ಇಂಜಿನಿಯರರು,
ಲೋ.ಇ. ಮಂಗಳೂರು ವಿಭಾಗ, ಮಂಗಳೂರು.

## ಕರಡು ಪ್ರಕಟಣೆ

**ವಿಷಯ:** ರಾಜ್ಯ ಹೆದ್ದಾರಿ ಅಧಿನಿಯಮ 1964 ಸೆಕ್ಷನ್ 7(4) ರಂತೆ ರಸ್ತೆ ಹಾದು ಹೋಗುವ ನಗರ, ಪಟ್ಟಣ, ಗ್ರಾಮಗಳ ಪರಿಮಿತಿ ಹಾಗೂ ಇತರ ಆಕ್ಷೇಪಿತ ಪ್ರದೇಶಗಳ ಗಡಿ ರೇಖೆ ಹಾಗೂ ಕಟ್ಟಡ ರೇಖೆ ನಿಗದಿಪಡಿಸುವ ಬಗ್ಗೆ.

**ಉಲ್ಲೇಖ:** 1) ಕರ್ನಾಟಕ ರಾಜ್ಯ ಪತ್ರದ ವಿಶೇಷ ಪತ್ರಿಕೆಯಲ್ಲಿ ದಿನಾಂಕ: 18.11.2002 ರಂತೆ.
2) ಸರ್ಕಾರದ ಪತ್ರದ ಸಂಖ್ಯೆ ಪಿ.ಡಬ್ಲ್ಯುಡಿ. 44 ಸಿ.ಆರ್.ಎಂ. 99 ದಿನಾಂಕ: 2.1.2002.
3) ಮುಖ್ಯ ಇಂಜಿನಿಯರ್ ರವರ ಪತ್ರ ಸಂಖ್ಯೆ ಸಂಕದ ಹೈ.ವೇ. ಆಕ್ಟ್ ಎ.ಇ. 1: 2001-02, ದಿನಾಂಕ: 25.1.2003.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖದಲ್ಲಿನ ಪ್ರಕಟಣೆಯಲ್ಲಿ ರಾಜ್ಯ ಹೆದ್ದಾರಿ ಅಧಿನಿಯಮ 1994 ಸೆಕ್ಷನ್ 3 ಮತ್ತು 7 ರಂತೆ ರಾಜ್ಯ ಹೆದ್ದಾರಿಗಳು ಹಾದು ಹೋಗುವ ನಗರ ಪಟ್ಟಣ ಗ್ರಾಮಾಂತರ ಪ್ರದೇಶಗಳಲ್ಲಿ ಅಧಿನಿಯಮ 7(1) ರಂತೆ ಈಗಾಗಲೇ ಹೆದ್ದಾರಿವಾರು ಪ್ರಕಟಣೆಗಳನ್ನು ಹೊರಡಿಸಿದಂತೆ ಅಧಿನಿಯಮ 7(2) ರ ಪ್ರಕಟಣೆಯ ನಂತರ ಸಾರ್ವಜನಿಕರಿಂದ ಬಂದಿರುವ ಆಕ್ಷೇಪಣೆಗಳನ್ನು ಹೆದ್ದಾರಿ ಪ್ರಾಧಿಕಾರಿಗಳು ಪರಿಶೀಲಿಸಿ ಸರ್ಕಾರಕ್ಕೆ ವರದಿಗಳನ್ನು ಸಲ್ಲಿಸಿದ ಮೇರೆಗೆ ಸರಕಾರವು ಈ ಕಾಯ್ದೆಯ ಅಧಿನಿಯಮ 7(4) ಅನ್ವಯ ಸರ್ಕಾರಕ್ಕೆ ದತ್ತವಾಗಿರುವ ಅಧಿಕಾರದಂತೆ ನಗರ, ಪಟ್ಟಣ, ಗ್ರಾಮಗಳ ಪರಿಮಿತಿ ಹಾಗೂ ಆಕ್ಷೇಪಿತ ಪ್ರದೇಶ ಹಾಗೂ ಹೊರವಲಯದ ಪ್ರದೇಶಗಳಲ್ಲಿ ಗಡಿರೇಖೆ ಮತ್ತು ಕಟ್ಟಡ ರೇಖೆಗಳನ್ನು ನಿಗದಿಪಡಿಸಿ ನಕ್ಷೆ ತಯಾರಿಸಲು ಕ್ರಮ ಕೈಗೊಳ್ಳಲಾಗಿದೆ. ಇದರ ಬಗ್ಗೆ ಮಾಹಿತಿಗಳನ್ನು ಜಿಲ್ಲೆಯ ಹೆದ್ದಾರಿ ಪ್ರಾಧಿಕಾರ ಮತ್ತು ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಮಂಗಳೂರು ವಿಭಾಗದ ಕಚೇರಿಯಿಂದ, ಹಾಗೂ ಉಪ ವಿಭಾಗದ ಕಛೇರಿಯಿಂದ ಪಡೆಯಬಹುದಾಗಿರುತ್ತದೆ.

### ಅನುಬಂಧ-1

### ಹೆದ್ದಾರಿ ಅಧಿನಿಯಮ ಅಧಿಸೂಚನೆ 7(4) ರ ಅನುಬಂಧ

**ರಾಜ್ಯ ಹೆದ್ದಾರಿಯ ಹೆಸರು ಮತ್ತು ಸಂಖ್ಯೆ: ಮಂಗಳೂರು-ಬಜಪೆ-ಕಟೀಲು-ಬೆಳ್ಮಣ್ ರಾಜ್ಯ ಹೆದ್ದಾರಿ ಕಿ.ಮೀ. 0.00 - 30.80 + 0.90 ಕಿ.ಮೀ. ಮೇರಿಹಿಲ್ ಬೈಪಾಸು ರಸ್ತೆ**

| ಕ್ರ.ಸಂ. | ರಾಜ್ಯ ಹೆದ್ದಾರಿಯ ವ್ಯಾಪ್ತಿಯಲ್ಲಿ ಒಳಪಡುವ ಕಿ.ಮೀ. | ಗ್ರಾಮ/ಪಟ್ಟಣದ ಹೆಸರು | ಸರ್ವೆ ನಂ. | ಹಿಸ್ಸಾ ನಂ. | ನಗರಸಭೆ ಪರಿಮಿತಿ/ಸಿಟಿ ಕಾರ್ಪೊರೇಷನ್ ಪರಿಮಿತಿ/ಸಿಟಿ ಮುನಿಸಿಪಲ್ ಪರಿಮಿತಿ/ಟೌನ್ ಮುನಿಸಿಪಲ್ ಪರಿಮಿತಿ/ಗ್ರಾಮ ಪಂಚಾಯಿತಿ ಪರಿಮಿತಿ/ವ್ಯಾಪ್ತಿಯೊಳಗೆ ಬರುವ ವಿಸ್ತೀರ್ಣ | | ನಗರಸಭೆ/ಸಿಟಿ ಮುನಿಸಿಪಲ್/ಟೌನ್ ಮುನಿಸಿಪಲ್/ಗ್ರಾಮ ಪಂಚಾಯ್ತಿ ಪರಿಮಿತಿ ಹೊರವಲಯ ಪ್ರದೇಶದ ವಿಸ್ತೀರ್ಣ | ಖಾತೆದಾರರ ಅಥವಾ ಅನುಭವದಾರರ ಹೆಸರು | ಒಟ್ಟು ವಿಸ್ತೀರ್ಣ ಚ.ಮೀ. ಗಳಲ್ಲಿ | ಷರಾ |
|---|---|---|---|---|---|---|---|---|---|---|
| | | | | | ಪರಿಮಿತಿ ಒಳಪಡುವ ವ್ಯಾಪ್ತಿ ಕಿ.ಮೀ. | ಚ.ಮೀ. ಗಳಲ್ಲಿ | ಚ.ಮೀ. ಗಳಲ್ಲಿ | | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | 0.00-1.80 | ಕದ್ರಿ ಗ್ರಾಮ | 32 | - | 0.00-1.80 | 600 | - | ಎನ್. ನಾರಾಯಣ ಆಚಾರ್ ಮತ್ತು ಇತರರು | 600 | |
| 2 | ” | ” | 36 | - | ” | 600 | - | ದಾಸಾಚಾರ್ಯ, ಎನ್. ನಾರಾಯಣ ಆಚಾರ್ ಮತ್ತು ಇತರರು | 600 | |
| 3 | ” | ” | 37 | - | ” | 1500 | - | ಸರಕಾರ, ರಾಜೇಶ್ ಆಚಾರ್ ಮತ್ತು ಇತರರು | 1500 | |
| 4 | ” | ” | 266 | - | ” | 1725 | - | ಶ್ರೀಮತಿ ವಾಗ್ದೇವಿ ಅಮ್ಮ ಮತ್ತು ಇತರರು | 1725 | |
| 5 | ” | ” | 38 | - | ” | 600 | - | - | 600 | |
| 6 | ” | ” | 55 | - | ” | 1500 | - | ಸರಕಾರ | 1500 | |
| 7 | ” | ” | 283 | - | ” | 2700 | - | ಬಿ.ಆರ್. ಶೆಟಪ್ಪಿ ಮತ್ತು ಇತರರು | 2700 | |

| 1 | 2 | 3 | 4 | 5 | 6 | 7 | 8 | 9 | 10 | 11 |
|---|---|---|---|---|---|---|---|---|---|---|
| 8 | 0.00-1.80 | ಕದ್ರಿ ಗ್ರಾಮ | 54 | - | 0.00-1.80 | 2400 | - | ಸರಕಾರ | 2400 | |
| 9 | ” | ” | 47 | - | ” | 3150 | - | ಶ್ರೀಧರ ಪಡಿವಾಳ ಮತ್ತು ಇತರರು | 3150 | |
| 10 | ” | ” | 48 | - | ” | 1350 | - | ಶ್ರೀಮತಿ ಕಮಲ ಹೆಂಗ್ಸು | 1350 | |
| 11 | ” | ” | 49 | - | ” | 375 | - | - | 375 | |
| 12 | ” | ” | 46 | - | ” | 2100 | - | - | 2100 | |
| 13 | ” | ” | 277 | - | ” | - | - | - | - | |
| 14 | ” | ” | 267 | - | ” | 750 | - | ಸರಕಾರ | 750 | |
| 15 | ” | ” | 262 | - | ” | 1200 | - | ಸರಕಾರ | 1200 | |
| 16 | ” | ” | 39 | - | ” | 300 | - | - | 300 | |
| 17 | ” | ” | 269 | - | ” | 60 | - | - | 60 | |
| 18 | ” | ” | 45 | - | ” | 330 | - | - | 330 | |
| 19 | ” | ” | 50 | - | ” | 300 | - | - | 300 | |
| 20 | ” | ” | 53 | - | ” | - | - | - | - | |
| | ಒಟ್ಟು | | | | | 21,540 | | | 21,540 | |

ಹೆದ್ದಾರಿ ಪ್ರಾಧಿಕಾರ
ಮತ್ತು ಕಾರ್ಯನಿರ್ವಾಹಕ ಇಂಜಿನಿಯರ್
ಲೋ.ಇ. ಮಂಗಳೂರು ವಿಭಾಗ, ಮಂಗಳೂರು

**ಅನುಬಂಧ-1**

**ಹೆದ್ದಾರಿ ಅಧಿನಿಯಮ ಅಧಿಸೂಚನೆ 7(4) ರ ಅನುಬಂಧ**

**ರಾಜ್ಯ ಹೆದ್ದಾರಿಯ ಹೆಸರು ಮತ್ತು ಸಂಖ್ಯೆ: ಮಂಗಳೂರು-ಬಜಪೆ-ಕಟೀಲು-ಬೆಳ್ಮಣ್ ರಾಜ್ಯ ಹೆದ್ದಾರಿ ಕಿ.ಮೀ. 0.00 - 30.80 + 0.90 ಕಿ.ಮೀ. ಮೇರಿಹಿಲ್ ಬೈಪಾಸು ರಸ್ತೆ**

| ಕ್ರ.ಸಂ. | ರಾಜ್ಯ ಹೆದ್ದಾರಿಯ ವ್ಯಾಪ್ತಿಯಲ್ಲಿ ಒಳಪಡುವ ಕಿ.ಮೀ. | ಗ್ರಾಮ/ಪಟ್ಟಣದ ಹೆಸರು | ಸರ್ವೆ ನಂ. | ಹಿಸ್ಸಾ ನಂ. | ನಗರಸಭೆ ಪರಿಮಿತಿ/ಸಿಟಿ ಕಾರ್ಪೊರೇಷನ್ ಪರಿಮಿತಿ/ಸಿಟಿ ಮುನಿಸಿಪಲ್ ಪರಿಮಿತಿ/ಟೌನ್ ಮುನಿಸಿಪಲ್ ಪರಿಮಿತಿ/ಗ್ರಾಮ ಪಂಚಾಯಿತಿ ಪರಿಮಿತಿ/ವ್ಯಾಪ್ತಿಯೊಳಗೆ ಬರುವ ವಿಸ್ತೀರ್ಣ | | ನಗರಸಭೆ/ಸಿಟಿ ಮುನಿಸಿಪಲ್/ ಟೌನ್ ಮುನಿಸಿಪಲ್/ ಗ್ರಾಮ ಪಂಚಾಯ್ತಿ ಪರಿಮಿತಿ ಹೊರವಲಯ ಪ್ರದೇಶದ ವಿಸ್ತೀರ್ಣ | ಖಾತೆದಾರರ ಅಥವಾ ಅನುಭವದಾರರ ಹೆಸರು | ಒಟ್ಟು ವಿಸ್ತೀರ್ಣ ಚ.ಮೀ. ಗಳಲ್ಲಿ | ಷರಾ |
|---|---|---|---|---|---|---|---|---|---|---|
| | | | | | ಪರಿಮಿತಿ ಒಳಪಡುವ ವ್ಯಾಪ್ತಿ ಕಿ.ಮೀ. | ಚ.ಮೀ. ಗಳಲ್ಲಿ | ಚ.ಮೀ. ಗಳಲ್ಲಿ | | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | 1.80-2.10 | ಪದವು ಗ್ರಾಮ | 46 | - | 1.80-2.10 | 840 | - | ವೆಂಕಪ್ಪ ನಾಯ್ಕ ಮತ್ತು ಇತರರು | 840 | |

| 1 | 2 | 3 | 4 | 5 | 6 | 7 | 8 | 9 | 10 | 11 |
|---|---|---|---|---|---|---|---|---|---|---|
| 2 | 1.80-2.10 | ಪದವು ಗ್ರಾಮ | 233 | - | 1.80-2.10 | 2400 | - | ಎಲ್.ಡಿ. ಬಲ್ಲಾಲ್, ಇತರರು | 2400 | |
| 3 | ” | ” | 235 | - | ” | 3000 | - | ಸುಮತಿ ಎಸ್ ಶೆಟ್ಟಿ ಮತ್ತು ಇತರರು | 3000 | |
| 4 | ” | ” | 236 | - | ” | 2400 | - | - | 2400 | |
| 5 | ” | ” | 237 | - | ” | 1200 | - | - | 1200 | |
| 6 | ” | ” | 1 | - | ” | 900 | - | - | 900 | |
| 7 | ” | ” | 2 | - | ” | 486 | - | - | 486 | |
| 8 | ” | ” | 3 | - | ” | 222 | - | - | 222 | |
| 9 | ” | ” | 7 | - | ” | 2952 | - | - | 2952 | |
| | ಒಟ್ಟು | | | | | **14400** | | | **14400** | |

ಹೆದ್ದಾರಿ ಪ್ರಾಧಿಕಾರ
ಮತ್ತು ಕಾರ್ಯನಿರ್ವಾಹಕ ಇಂಜಿನಿಯರ್
ಲೋ.ಇ. ಮಂಗಳೂರು ವಿಭಾಗ, ಮಂಗಳೂರು

## ಅನುಬಂಧ-1

## ಹೆದ್ದಾರಿ ಅಧಿನಿಯಮ ಅಧಿಸೂಚನೆ 7(4) ರ ಅನುಬಂಧ

**ರಾಜ್ಯ ಹೆದ್ದಾರಿಯ ಹೆಸರು ಮತ್ತು ಸಂಖ್ಯೆ: ಮಂಗಳೂರು-ಬಜಪೆ-ಕಟೀಲು-ಬೆಳ್ಮಣ್ ರಾಜ್ಯ ಹೆದ್ದಾರಿ ಕಿ.ಮೀ. 0.00 - 30.80 + 0.90 ಕಿ.ಮೀ. ಮೇರಿಹಿಲ್ ಬೈಪಾಸು ರಸ್ತೆ**

| ಕ್ರ.ಸಂ. | ರಾಜ್ಯ ಹೆದ್ದಾರಿಯ ವ್ಯಾಪ್ತಿಯಲ್ಲಿ ಒಳಪಡುವ ಕಿ.ಮೀ. | ಗ್ರಾಮ/ಪಟ್ಟಣದ ಹೆಸರು | ಸರ್ವೆ ನಂ. | ಹಿಸ್ಸಾ ನಂ. | ನಗರಸಭೆ ಪರಿಮಿತಿ/ಸಿಟಿ ಕಾರ್ಪೊರೇಷನ್ ಪರಿಮಿತಿ/ಸಿಟಿ ಮುನಿಸಿಪಲ್ ಪರಿಮಿತಿ/ಟೌನ್ ಮುನಿಸಿಪಲ್ ಪರಿಮಿತಿ/ಗ್ರಾಮ ಪಂಚಾಯಿತಿ ಪರಿಮಿತಿ/ವ್ಯಾಪ್ತಿಯೊಳಗೆ ಬರುವ ವಿಸ್ತೀರ್ಣ | | ನಗರಸಭೆ/ಸಿಟಿ ಮುನಿಸಿಪಲ್/ ಟೌನ್ ಮುನಿಸಿಪಲ್/ ಗ್ರಾಮ ಪಂಚಾಯ್ತಿ ಪರಿಮಿತಿ ಹೊರವಲಯ ಪ್ರದೇಶದ ವಿಸ್ತೀರ್ಣ | ಖಾತೆದಾರರ ಅಥವಾ ಅನುಭವದಾರರ ಹೆಸರು | ಒಟ್ಟು ವಿಸ್ತೀರ್ಣ ಚ.ಮೀ. ಗಳಲ್ಲಿ | ಷರಾ |
|---|---|---|---|---|---|---|---|---|---|---|
| | | | | | ಪರಿಮಿತಿ ಒಳಪಡುವ ವ್ಯಾಪ್ತಿ ಕಿ.ಮೀ. | ಚ.ಮೀ. ಗಳಲ್ಲಿ | ಚ.ಮೀ. ಗಳಲ್ಲಿ | | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | 2.10-2.65 | ದೇರೆಬೈಲು ಗ್ರಾಮ | 138 | - | 2.10-2.65 | 900 | - | ಸರಕಾರ, ಶೇಖರ್ ಮತ್ತು ಇತರರು | 900 | |
| 2 | ” | ” | 163 | - | ” | 825 | - | ಕೇಶವ ಮತ್ತು ಇತರರು | 825 | |
| 3 | ” | ” | 162 | - | ” | 900 | - | ಸರಕಾರ, ಮಾಧವ ಶಾನ್ ಭಾಗ್ ಮತ್ತು ಇತರರು | 900 | |

| 1 | 2 | 3 | 4 | 5 | 6 | 7 | 8 | 9 | 10 | 11 |
|---|---|---|---|---|---|---|---|---|---|---|
| 4 | 2.10-2.65 | ದೇರೆಬೈಲು ಗ್ರಾಮ | 85 | - | 2.10-2.65 | 1500 | - | ರತ್ನವರ್ಮ ಪಡಿವಾಳ ಮತ್ತು ಇತರರು | 1500 | |
| 5 | ” | ” | 93 | - | ” | 300 | - | ಸರಕಾರ ಮತ್ತು ಲೇಡಿಹಿಲ್ ಸೊಸೈಟಿ | 300 | |
| | ಒಟ್ಟು | | | | | **4425** | | | **4425** | |

ಹೆದ್ದಾರಿ ಪ್ರಾಧಿಕಾರ
ಮತ್ತು ಕಾರ್ಯನಿರ್ವಾಹಕ ಇಂಜಿನಿಯರ್
ಲೋ.ಇ. ಮಂಗಳೂರು ವಿಭಾಗ, ಮಂಗಳೂರು

## ಅನುಬಂಧ-1

## ಹೆದ್ದಾರಿ ಅಧಿನಿಯಮ ಅಧಿಸೂಚನೆ 7(4) ರ ಅನುಬಂಧ

### ರಾಜ್ಯ ಹೆದ್ದಾರಿಯ ಹೆಸರು ಮತ್ತು ಸಂಖ್ಯೆ: ಮಂಗಳೂರು-ಬಜಪೆ-ಕಟೀಲು-ಬೆಳ್ಮಣ್ ರಾಜ್ಯ ಹೆದ್ದಾರಿ ಕಿ.ಮೀ. 0.00 - 30.80 + 0.90 ಕಿ.ಮೀ. ಮೇರಿಹಿಲ್ ಬೈಪಾಸು ರಸ್ತೆ

| ಕ್ರ.ಸಂ. | ರಾಜ್ಯ ಹೆದ್ದಾರಿಯ ವ್ಯಾಪ್ತಿಯಲ್ಲಿ ಒಳಪಡುವ ಕಿ.ಮೀ. | ಗ್ರಾಮ/ಪಟ್ಟಣದ ಹೆಸರು | ಸರ್ವೆ ನಂ. | ಹಿಸ್ಸಾ ನಂ. | ನಗರಸಭೆ ಪರಿಮಿತಿ/ಸಿಟಿ ಕಾರ್ಪೊರೇಷನ್ ಪರಿಮಿತಿ/ಸಿಟಿ ಮುನಿಸಿಪಲ್ ಪರಿಮಿತಿ/ಟೌನ್ ಮುನಿಸಿಪಲ್ ಪರಿಮಿತಿ/ಗ್ರಾಮ ಪಂಚಾಯಿತಿ ಪರಿಮಿತಿ/ವ್ಯಾಪ್ತಿಯೊಳಗೆ ಬರುವ ವಿಸ್ತೀರ್ಣ | | ನಗರಸಭೆ/ಸಿಟಿ ಮುನಿಸಿಪಲ್/ ಟೌನ್ ಮುನಿಸಿಪಲ್/ ಗ್ರಾಮ ಪಂಚಾಯ್ತಿ ಪರಿಮಿತಿ ಹೊರವಲಯ ಪ್ರದೇಶದ ವಿಸ್ತೀರ್ಣ | ಖಾತೆದಾರರ ಅಥವಾ ಅನುಭವದಾರರ ಹೆಸರು | ಒಟ್ಟು ವಿಸ್ತೀರ್ಣ ಚ.ಮೀ. ಗಳಲ್ಲಿ | ಷರಾ |
|---|---|---|---|---|---|---|---|---|---|---|
| | | | | | ಪರಿಮಿತಿ ಒಳಪಡುವ ವ್ಯಾಪ್ತಿ ಕಿ.ಮೀ. | ಚ.ಮೀ. ಗಳಲ್ಲಿ | ಚ.ಮೀ. ಗಳಲ್ಲಿ | | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | 2.65-2.70 | ಪಚ್ಚನಾಡಿ ಗ್ರಾಮ | 12 | - | 2.65-2.70 | - | - | - | - | |
| 2 | ” | ” | 87 | - | ” | 600 | - | ಸರಕಾರ, ಮಾದವ ಶಾನ್ ಭಾಗ್ ಮತ್ತು ಇತರರು | 600 | |
| 3 | ” | ” | 88 | - | ” | 60 | - | ಸರಕಾರ, ದ.ಕ. ಬೋರ್ಡ್ ಪ್ರೆಸಿಡೆಂಟ್, ಸೈಂಟ್ ಲಾರೆನ್ಸ್ ಚರ್ಚ್ | 60 | |
| | ಒಟ್ಟು | | | | | **660** | | | **660** | |

ಹೆದ್ದಾರಿ ಪ್ರಾಧಿಕಾರ
ಮತ್ತು ಕಾರ್ಯನಿರ್ವಾಹಕ ಇಂಜಿನಿಯರ್
ಲೋ.ಇ. ಮಂಗಳೂರು ವಿಭಾಗ, ಮಂಗಳೂರು

# ಅನುಬಂಧ-1

## ಹೆದ್ದಾರಿ ಅಧಿನಿಯಮ ಅಧಿಸೂಚನೆ 7(4) ರ ಅನುಬಂಧ

### ರಾಜ್ಯ ಹೆದ್ದಾರಿಯ ಹೆಸರು ಮತ್ತು ಸಂಖ್ಯೆ: ಮಂಗಳೂರು-ಬಜಪೆ-ಕಟೀಲು-ಬೆಳ್ಮಣ್ ರಾಜ್ಯ ಹೆದ್ದಾರಿ ಕಿ.ಮೀ. 0.00 - 30.80 + 0.90 ಕಿ.ಮೀ. ಮೇರಿಹಿಲ್ ಬೈಪಾಸು ರಸ್ತೆ

| ಕ್ರ.ಸಂ. | ರಾಜ್ಯ ಹೆದ್ದಾರಿಯ ವ್ಯಾಪ್ತಿಯಲ್ಲಿ ಒಳಪಡುವ ಕಿ.ಮೀ. | ಗ್ರಾಮ/ಪಟ್ಟಣದ ಹೆಸರು | ಸರ್ವೆ ನಂ. | ಹಿಸ್ಸಾ ನಂ. | ನಗರಸಭೆ ಪರಿಮಿತಿ/ಸಿಟಿ ಕಾರ್ಪೊರೇಷನ್ ಪರಿಮಿತಿ/ಸಿಟಿ ಮುನಿಸಿಪಲ್ ಪರಿಮಿತಿ/ಟೌನ್ ಮುನಿಸಿಪಲ್ ಪರಿಮಿತಿ/ಗ್ರಾಮ ಪಂಚಾಯಿತಿ ಪರಿಮಿತಿ/ವ್ಯಾಪ್ತಿಯೊಳಗೆ ಬರುವ ವಿಸ್ತೀರ್ಣ | | ನಗರಸಭೆ/ಸಿಟಿ ಮುನಿಸಿಪಲ್/ ಟೌನ್ ಮುನಿಸಿಪಲ್/ ಗ್ರಾಮ ಪಂಚಾಯ್ತಿ ಪರಿಮಿತಿ ಹೊರವಲಯ ಪ್ರದೇಶದ ವಿಸ್ತೀರ್ಣ | ಖಾತೆದಾರರ ಅಥವಾ ಅನುಭವದಾರರ ಹೆಸರು | ಒಟ್ಟು ವಿಸ್ತೀರ್ಣ ಚ.ಮೀ. ಗಳಲ್ಲಿ | ಷರಾ |
|---|---|---|---|---|---|---|---|---|---|---|
| | | | | | ಪರಿಮಿತಿ ಒಳಪಡುವ ವ್ಯಾಪ್ತಿ ಕಿ.ಮೀ. | ಚ.ಮೀ. ಗಳಲ್ಲಿ | ಚ.ಮೀ. ಗಳಲ್ಲಿ | | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | 2.70-4.00 | ಕಾವೂರು ಗ್ರಾಮ | 15 | - | 2.70-4.00 | 750 | - | ಸರಕಾರ, ಚೇರ್ ಮೆನ್, ಲೇಡಿಹಿಲ್ ಸೊಸೈಟಿ ಮತ್ತು ಇತರರು | 750 | |
| 2 | ” | ” | 16 | - | ” | 600 | - | ಸರಕಾರ, ಎ ಪ್ರೈಸ್ ಆನ್ ಕಾರ್ಮೆಲ್ ಸೊಸೈಟಿ ಇತರರು | 600 | |
| 3 | ” | ” | 12 | - | ” | 1650 | - | ಸರಕಾರ, ಎ. ಪ್ರೈಸ್ ಆನ್ ಕಾರ್ಮೆಲ್ ಸೊಸೈಟಿ ಇತರರು | 1650 | |
| 4 | ” | ” | 13 | - | ” | 150 | - | - | 150 | |
| 5 | ” | ” | 11 | - | ” | 750 | - | ಶ್ರೀನಿವಾಸ ಪ್ರಭು ಮತ್ತು ಇತರರು | 750 | |
| 6 | ” | ” | 10 | - | ” | 750 | - | ಸರಕಾರ, ಉಮಾನಾಥ ಪೈ ಇತರರು | 750 | |
| 7 | ” | ” | 9 | - | ” | 2100 | - | ಸರಕಾರ, ಉಮಾನಾಥ ಪೈ ಇತರರು | 2100 | |
| 8 | ” | ” | 8 | - | ” | - | - | ಶ್ರೀನಿವಾಸ ನಾಯ್ಕ ಮತ್ತು ಇತರರು | - | |
| 9 | ” | ” | 7 | - | ” | 150 | - | ರಾಕಿಲ್ ಪಿಂಟೊ ಮತ್ತು ಇತರರು | 150 | |
| 10 | ” | ” | 1 | - | ” | - | - | ಸರಕಾರ, ಗೋವಿಂದ ಕಾಮತ್ ಮತ್ತು ಇತರರು | - | |
| 11 | ” | ” | 2 | - | ” | 900 | - | ರಾಧಾಭ್ಯಾ ಮತ್ತು ಇತರರು | 900 | |
| | ಒಟ್ಟು | | | | | 7800 | | | 7800 | |

ಹೆದ್ದಾರಿ ಪ್ರಾಧಿಕಾರ
ಮತ್ತು ಕಾರ್ಯನಿರ್ವಾಹಕ ಇಂಜಿನಿಯರ್
ಲೋ.ಇ. ಮಂಗಳೂರು ವಿಭಾಗ, ಮಂಗಳೂರು

## ಅನುಬಂಧ-1

## ಹೆದ್ದಾರಿ ಅಧಿನಿಯಮ ಅಧಿಸೂಚನೆ 7(4) ರ ಅನುಬಂಧ

### ರಾಜ್ಯ ಹೆದ್ದಾರಿಯ ಹೆಸರು ಮತ್ತು ಸಂಖ್ಯೆ: ಮಂಗಳೂರು-ಬಜಪೆ-ಕಟೀಲು-ಬೆಳ್ಮಣ್ ರಾಜ್ಯ ಹೆದ್ದಾರಿ ಕಿ.ಮೀ. 0.00 - 30.80 + 0.90 ಕಿ.ಮೀ. ಮೇರಿಹಿಲ್ ಬೈಪಾಸು ರಸ್ತೆ

| ಕ್ರ.ಸಂ. | ರಾಜ್ಯ ಹೆದ್ದಾರಿಯ ವ್ಯಾಪ್ತಿಯಲ್ಲಿ ಒಳಪಡುವ ಕಿ.ಮೀ. | ಗ್ರಾಮ/ಪಟ್ಟಣದ ಹೆಸರು | ಸರ್ವೆ ನಂ. | ಹಿಸ್ಸಾ ನಂ. | ನಗರಸಭೆ ಪರಿಮಿತಿ/ಸಿಟಿ ಕಾರ್ಪೊರೇಷನ್ ಪರಿಮಿತಿ/ಸಿಟಿ ಮುನಿಸಿಪಲ್ ಪರಿಮಿತಿ/ಟೌನ್ ಮುನಿಸಿಪಲ್ ಪರಿಮಿತಿ/ಗ್ರಾಮ ಪಂಚಾಯಿತಿ ಪರಿಮಿತಿ/ವ್ಯಾಪ್ತಿಯೊಳಗೆ ಬರುವ ವಿಸ್ತೀರ್ಣ | | ನಗರಸಭೆ/ಸಿಟಿ ಮುನಿಸಿಪಲ್/ ಟೌನ್ ಮುನಿಸಿಪಲ್/ ಗ್ರಾಮ ಪಂಚಾಯ್ತಿ ಪರಿಮಿತಿ ಹೊರವಲಯ ಪ್ರದೇಶದ ವಿಸ್ತೀರ್ಣ | ಖಾತೆದಾರರ ಅಥವಾ ಅನುಭವದಾರರ ಹೆಸರು | ಒಟ್ಟು ವಿಸ್ತೀರ್ಣ ಚ.ಮೀ. ಗಳಲ್ಲಿ | ಷರಾ |
|---|---|---|---|---|---|---|---|---|---|---|
| | | | | | ಪರಿಮಿತಿ ಒಳಪಡುವ ವ್ಯಾಪ್ತಿ ಕಿ.ಮೀ. | ಚ.ಮೀ. ಗಳಲ್ಲಿ | ಚ.ಮೀ. ಗಳಲ್ಲಿ | | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | 4.00-7.80 | ಮರಕಡ ಗ್ರಾಮ | 60 | - | 4.00-7.80 | - | - | - | - | |
| 2 | ” | ” | 57 | - | ” | - | - | - | - | |
| 3 | ” | ” | 56 | - | ” | 3300 | - | ಸರಕಾರ | 3300 | |
| 4 | ” | ” | 81 | - | ” | 2700 | - | - | 2700 | |
| 5 | ” | ” | 58 | - | ” | 3900 | - | ಸರಕಾರ | 3900 | |
| 6 | ” | ” | 59 | - | ” | 4896 | - | ಸರಕಾರ | 4896 | |
| 7 | ” | ” | 54 | - | ” | 1500 | - | - | 1500 | |
| 8 | ” | ” | 81 | - | ” | 2700 | - | - | 2700 | |
| 9 | ” | ” | 87 | - | ” | 1200 | - | - | 1200 | |
| 10 | ” | ” | 82 | - | ” | 450 | - | - | 450 | |
| 11 | ” | ” | 83 | - | ” | 2100 | - | - | 2100 | |
| 12 | ” | ” | 102 | - | ” | 2400 | - | ಚಾರ್ಲ್ಸ್ ಪಿಂಟೋ ಮತ್ತು ಸರಕಾರ ಮತ್ತು ಇತರರು | 2400 | |
| 13 | ” | ” | 61 | - | ” | 900 | - | ಲೋಕನಾಥ ಮತ್ತು ಇತರರು | 900 | |
| 14 | ” | ” | 85 | - | ” | 1650 | - | ಸರಕಾರ | 1650 | |

| 1 | 2 | 3 | 4 | 5 | 6 | 7 | 8 | 9 | 10 | 11 |
|---|---|---|---|---|---|---|---|---|---|---|
| 15 | 4.00-7.80 | ಮರಕಡ ಗ್ರಾಮ | 62 | - | 4.00-7.80 | - | - | - | - | |
| 16 | ” | ” | 90 | - | ” | 600 | - | ಸರಕಾರ | 600 | |
| 17 | ” | ” | 63 | - | ” | 150 | - | - | 150 | |
| 18 | ” | ” | 64 | - | ” | 4800 | - | ಮೇರಿ ಡಿ ಸೋಜಾ ಮತ್ತು ಇತರರು | 4800 | |
| 19 | ” | ” | 66 | - | ” | 3000 | - | ಶ್ರೀನಿವಾಸ ರಾವ್ ಮತ್ತು ಇತರರು | 3000 | |
| 20 | ” | ” | 78 | - | ” | 750 | - | ಸರಕಾರ | 750 | |
| 21 | ” | ” | 77 | - | ” | - | - | - | - | |
| 22 | ” | ” | 67 | - | ” | 900 | - | - | 900 | |
| 23 | ” | ” | 69 | - | ” | 1050 | - | ಶ್ರೀ ಕೃಷ್ಣ ಭಟ್ ಮತ್ತು ಇತರರು | 1050 | |
| 24 | ” | ” | 71 | - | ” | 3600 | - | ಸರಕಾರ, ಜಲಜಮ್ಮ ಮತ್ತು ಇತರರು | 3600 | |
| 25 | ” | ” | 70 | - | ” | 300 | - | ನರೇಂದ್ರನಾಥ ರೈ ಮತ್ತು ಇತರರು | 300 | |
| 26 | ” | ” | 94 | - | ” | 1050 | - | - | 1050 | |
| 27 | ” | ” | 101 | - | ” | 1200 | - | - | 1200 | |
| 28 | ” | ” | 97 | - | ” | 750 | - | - | 750 | |
| 29 | ” | ” | 26 | - | ” | 2700 | - | ರಾಮಣ್ಣ ರೈ, ಸರಕಾರ ರಸ್ತೆ | 2700 | |
| 30 | ” | ” | 34 | - | ” | 300 | - | ರಾಮಣ್ಣ ರೈ, ಸರಕಾರ ರಸ್ತೆ | 300 | |
| 31 | ” | ” | 31 | - | ” | 450 | - | ಸರಕಾರ, ಮಂಜಯ್ಯ ನ್ಯಾಕ್, ಮತ್ತು ಇತರರು | 450 | |
| 32 | ” | ” | 32 | - | ” | 600 | - | ರಾಮಣ್ಣ ರೈ ಮತ್ತು ಇತರರು | 600 | |
| 33 | ” | ” | 33 | - | ” | 204 | - | ರಸ್ತೆ | 204 | |
| 34 | ” | ” | 28 | - | ” | 450 | - | ಸರಕಾರಿ ರಸ್ತೆ ದುರ್ಗಮ್ಮ ಮತ್ತು ಇತರರು | 450 | |
| 35 | ” | ” | 27 | - | ” | 150 | - | ರಸ್ತೆ | 150 | |
| | ಒಟ್ಟು | | | | | 50,700 | | | 50,700 | |

ಹೆದ್ದಾರಿ ಪ್ರಾಧಿಕಾರ
ಮತ್ತು ಕಾರ್ಯನಿರ್ವಾಹಕ ಇಂಜಿನಿಯರ್
ಲೋ.ಇ. ಮಂಗಳೂರು ವಿಭಾಗ, ಮಂಗಳೂರು

## ಅನುಬಂಧ-1

## ಹೆದ್ದಾರಿ ಅಧಿನಿಯಮ ಅಧಿಸೂಚನೆ 7(4) ರ ಅನುಬಂಧ

### ರಾಜ್ಯ ಹೆದ್ದಾರಿಯ ಹೆಸರು ಮತ್ತು ಸಂಖ್ಯೆ: ಮಂಗಳೂರು-ಬಜಪೆ-ಕಟೀಲು-ಬೆಳ್ಮಣ್ ರಾಜ್ಯ ಹೆದ್ದಾರಿ ಕಿ.ಮೀ. 0.00 - 30.80 + 0.90 ಕಿ.ಮೀ. ಮೇರಿಹಿಲ್ ಬೈಪಾಸು ರಸ್ತೆ

| ಕ್ರ.ಸಂ. | ರಾಜ್ಯ ಹೆದ್ದಾರಿಯ ವ್ಯಾಪ್ತಿಯಲ್ಲಿ ಒಳಪಡುವ ಕಿ.ಮೀ. | ಗ್ರಾಮ/ಪಟ್ಟಣದ ಹೆಸರು | ಸರ್ವೆ ನಂ. | ಹಿಸ್ಸಾ ನಂ. | ನಗರಸಭೆ ಪರಿಮಿತಿ/ಸಿಟಿ ಕಾರ್ಪೊರೇಷನ್ ಪರಿಮಿತಿ/ಸಿಟಿ ಮುನಿಸಿಪಲ್ ಪರಿಮಿತಿ/ಟೌನ್ ಮುನಿಸಿಪಲ್ ಪರಿಮಿತಿ/ಗ್ರಾಮ ಪಂಚಾಯಿತಿ ಪರಿಮಿತಿ/ವ್ಯಾಪ್ತಿಯೊಳಗೆ ಬರುವ ವಿಸ್ತೀರ್ಣ | | ನಗರಸಭೆ/ಸಿಟಿ ಮುನಿಸಿಪಲ್/ ಟೌನ್ ಮುನಿಸಿಪಲ್/ ಗ್ರಾಮ ಪಂಚಾಯ್ತಿ ಪರಿಮಿತಿ ಹೊರವಲಯ ಪ್ರದೇಶದ ವಿಸ್ತೀರ್ಣ | ಖಾತೆದಾರರ ಅಥವಾ ಅನುಭವದಾರರ ಹೆಸರು | ಒಟ್ಟು ವಿಸ್ತೀರ್ಣ ಚ.ಮೀ. ಗಳಲ್ಲಿ | ಷರಾ |
|---|---|---|---|---|---|---|---|---|---|---|
| | | | | | ಪರಿಮಿತಿ ಒಳಪಡುವ ವ್ಯಾಪ್ತಿ ಕಿ.ಮೀ. | ಚ.ಮೀ. ಗಳಲ್ಲಿ | ಚ.ಮೀ. ಗಳಲ್ಲಿ | | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | 11.90-16.00 | ಬಜಪೆ ಗ್ರಾಮ | 183 | - | 11.90-16.00 | 900 | - | ಸರಕಾರ | 900 | |
| 2 | ” | ” | 144 | - | ” | 1050 | - | ಹೆನ್ರಿಸ್ ಫೆರ್ನಾಂಡಿಸ್ ಮತ್ತು ಇತರರು | 1050 | |
| 3 | ” | ” | 150 | - | ” | 1350 | - | ಸರಕಾರ, ನಂಜುಂಡ ರಾವ್ ಮತ್ತು ಇತರರು | 1350 | |
| 4 | ” | ” | 136 | - | ” | 450 | - | ನೀಲಮ್ಮ ಮತ್ತು ಇತರರು | 450 | |
| 5 | ” | ” | 146 | - | ” | 600 | - | ಸರಕಾರ | 600 | |
| 6 | ” | ” | 43 | - | ” | 750 | - | ಸರಕಾರ, ಪಾಸ್ಕಲ್ ಬ್ಯಾಪ್ಟಿಸ್ಟ್ ಪಿಂಟೋ ಮತ್ತು ಇತರರು | 750 | |
| 7 | ” | ” | 45 | - | ” | 450 | - | ಸರಕಾರ, ಎಡ್ಮಂಡ್ ಗೋಂದಾಲಿಸ್ ಮತ್ತು ಇತರರು | 450 | |
| 8 | ” | ” | 47 | - | ” | 150 | - | ಸರಕಾರ, ಎಡ್ಮಂಡ್ ಗೋಂದಾಲಿಸ್ ಮತ್ತು ಇತರರು | 150 | |
| 9 | ” | ” | 46 | - | ” | 300 | - | ಸರಕಾರ, ಜಾನಕಿ ಹೆಂಗ್ಸು ಮತ್ತು ಇತರರು | 300 | |
| 10 | ” | ” | 53 | - | ” | 4800 | - | ಸರಕಾರ, ನಾರಾಯಣ ಶೆಡ್ತಿ ಮತ್ತು ಇತರರು | 4800 | |
| 11 | ” | ” | 55 | - | ” | 300 | - | ವಿಜಯಲಕ್ಷ್ಮಿ ಮತ್ತು ಇತರರು | 300 | |
| 12 | ” | ” | 52 | - | ” | 600 | - | ಸರಕಾರ, ಜಜಾನಕಿ ಮಂಜುನಾಥ್ | 600 | |
| 13 | ” | ” | 51 | - | ” | 300 | - | ರಾಮದಾಸ್ ಮತ್ತು ಇತರರು | 300 | |
| 14 | ” | ” | 89 | - | ” | 2400 | - | ವಿಜಯ ವಿಠ್ಠಲ ದೇವರು | 2400 | |
| 15 | ” | ” | 90 | - | ” | 750 | - | ವಾಸ್ತವ ರಾವ್ ಮತ್ತು ಇತರರು | 750 | |

| 1 | 2 | 3 | 4 | 5 | 6 | 7 | 8 | 9 | 10 | 11 |
|---|---|---|---|---|---|---|---|---|---|---|
| 16 | 11.90-16.00 | ಬಜಪೆ ಗ್ರಾಮ | 91 | - | 11.90-16.00 | 600 | - | ಸರಕಾರ, ಬಿ.ಪಿ. ಇಸ್ಮಾಯಿಲ್ ಮತ್ತು ಇತರರು | 600 | |
| 17 | ” | ” | 92 | - | ” | 1050 | - | ಸರಕಾರ, ನರಸಿಂಹ ಶಾನುಬೋಗು ಮತ್ತು ಇತರರು | 1050 | |
| 18 | ” | ” | 93 | - | ” | 900 | - | ಸರಕಾರ, ರಾಘವ ರಾವ್ ಮತ್ತು ಇತರರು | 900 | |
| 19 | ” | ” | 95 | - | ” | 750 | - | ಸರಕಾರ, ಡೆನಿಸ್ ಫೆರ್ನಾಂಡಿಸ್ ಮತ್ತು ಇತರರು | 750 | |
| 20 | ” | ” | 84 | - | ” | 2100 | - | ಸರಕಾರ, ಸೈಂಟ್ ಜೋಸೆಫ್ ಚರ್ಚ್ ಮತ್ತು ಇತರರು | 2100 | |
| 21 | ” | ” | 79 | - | ” | 750 | - | ಸರಕಾರ, ಸೈಂಟ್ ಜೋಸೆಫ್ ಚರ್ಚ್ ಮತ್ತು ಇತರರು | 750 | |
| 22 | ” | ” | 83 | - | ” | 750 | - | ಸರಕಾರ, ಥಾಮಸ್ ಎಡ್ಬರ್ಡ್ ಮತ್ತು ಇತರರು | 750 | |
| 23 | ” | ” | 81 | - | ” | 150 | - | ಸರಕಾರ, ಸಿಸ್ಟರ್ ಸಿಸಿರಿಯನ್ ಮತ್ತು ಇತರರು | 150 | |
| 24 | ” | ” | 102 | - | ” | 450 | - | ಸರಕಾರ | 450 | |
| 25 | ” | ” | 82 | - | ” | 2700 | - | ಸರಕಾರ, ಸೈಂಟ್ ಜೋಸೆಫ್ ಚರ್ಚ್ | 2700 | |
| 26 | ” | ” | 103 | - | ” | 1950 | - | ಎ.ಸಿ. ಕಾಮತ್ ಇತರರು | 1950 | |
| 27 | ” | ” | 109 | - | ” | 150 | - | ಎ.ಸಿ. ಕಾಮತ್ ಇತರರು | 150 | |
| 28 | ” | ” | 110 | - | ” | 900 | - | ಪದ್ಮಾವತಿ ಮತ್ತು ಇತರರು | 900 | |
| 29 | ” | ” | 130 | - | ” | 525 | - | ಸರಕಾರ, ಕೆಂಪು ಹೆಂಗ್ಸು ಮತ್ತು ಇತರರು | 525 | |
| 30 | ” | ” | 116 | - | ” | 1500 | - | ಕೆಂಪು ಹೆಂಗ್ಸು ಮತ್ತು ಇತರರು | 1500 | |
| 31 | ” | ” | 118 | - | ” | 150 | - | ಕೆಂಪು ಹೆಂಗ್ಸು ಮತ್ತು ಇತರರು | 150 | |
| 32 | ” | ” | 119 | - | ” | 1800 | - | ಎಂ.ಜಿ. ಮತ್ತು ಇತರರು | 1800 | |
| 33 | ” | ” | 122 | - | ” | 1200 | - | ಡಾ: ಬಾಸ್ಕರ್ ರಾವ್ ಮತ್ತು ಇತರರು | 1200 | |
| 34 | ” | ” | 115 | - | ” | 2100 | - | ಹರಿಶ್ಚಂದ್ರ ಮತ್ತು ಇತರರು | 2100 | |
| 35 | ” | ” | 147 | - | ” | 600 | - | ಅಪ್ಪಯ್ಯ ಹೆಗ್ಡೆ | 600 | |
| 36 | ” | ” | 124 | - | ” | 2400 | - | ಇಸ್ಮಾಯಿಲ್ ಮತ್ತು ಇತರರು | 2400 | |
| 37 | ” | ” | 176 | - | ” | 1800 | - | ಸರಕಾರ, ಕ್ಲಿಫರ್ಡ್ ಮತ್ತು ಇತರರು | 1800 | |
| 38 | ” | ” | 129 | - | ” | 600 | - | ಸರಕಾರ, ರೆಹಮಾನ್ ಮತ್ತು ಇತರರು | 600 | |
| | ಒಟ್ಟು | | | | | **41025** | | | **41025** | |

ಹೆದ್ದಾರಿ ಪ್ರಾಧಿಕಾರ
ಮತ್ತು ಕಾರ್ಯನಿರ್ವಾಹಕ ಇಂಜಿನಿಯರ್
ಲೋ.ಇ. ಮಂಗಳೂರು ವಿಭಾಗ, ಮಂಗಳೂರು

## ಅನುಬಂಧ-1

## ಹೆದ್ದಾರಿ ಅಧಿನಿಯಮ ಅಧಿಸೂಚನೆ 7(4) ರ ಅನುಬಂಧ

**ರಾಜ್ಯ ಹೆದ್ದಾರಿಯ ಹೆಸರು ಮತ್ತು ಸಂಖ್ಯೆ: ಮಂಗಳೂರು-ಬಜಪೆ-ಕಟೀಲು-ಬೆಳ್ಮಣ್ ರಾಜ್ಯ ಹೆದ್ದಾರಿ ಕಿ.ಮೀ. 0.00 - 30.80 + 0.90 ಕಿ.ಮೀ. ಮೇರಿಹಿಲ್ ಬೈಪಾಸು ರಸ್ತೆ**

| ಕ್ರ.ಸಂ. | ರಾಜ್ಯ ಹೆದ್ದಾರಿಯ ವ್ಯಾಪ್ತಿಯಲ್ಲಿ ಒಳಪಡುವ ಕಿ.ಮೀ. | ಗ್ರಾಮ/ಪಟ್ಟಣದ ಹೆಸರು | ಸರ್ವೆ ನಂ. | ಹಿಸ್ಸಾ ನಂ. | ನಗರಸಭೆ ಪರಿಮಿತಿ/ಸಿಟಿ ಕಾರ್ಪೊರೇಷನ್ ಪರಿಮಿತಿ/ಸಿಟಿ ಮುನಿಸಿಪಲ್ ಪರಿಮಿತಿ/ಟೌನ್ ಮುನಿಸಿಪಲ್ ಪರಿಮಿತಿ/ಗ್ರಾಮ ಪಂಚಾಯಿತಿ ಪರಿಮಿತಿ/ವ್ಯಾಪ್ತಿಯೊಳಗೆ ಬರುವ ವಿಸ್ತೀರ್ಣ | | ನಗರಸಭೆ/ಸಿಟಿ ಮುನಿಸಿಪಲ್/ ಟೌನ್ ಮುನಿಸಿಪಲ್/ ಗ್ರಾಮ ಪಂಚಾಯ್ತಿ ಪರಿಮಿತಿ ಹೊರವಲಯ ಪ್ರದೇಶದ ವಿಸ್ತೀರ್ಣ | ಖಾತೆದಾರರ ಅಥವಾ ಅನುಭವದಾರರ ಹೆಸರು | ಒಟ್ಟು ವಿಸ್ತೀರ್ಣ ಚ.ಮೀ. ಗಳಲ್ಲಿ | ಷರಾ |
|---|---|---|---|---|---|---|---|---|---|---|
| | | | | | ಪರಿಮಿತಿ ಒಳಪಡುವ ವ್ಯಾಪ್ತಿ ಕಿ.ಮೀ. | ಚ.ಮೀ. ಗಳಲ್ಲಿ | ಚ.ಮೀ. ಗಳಲ್ಲಿ | | | |
| 1 | 16.00-16.50 | ಪೆರ್ಮುದೆ ಗ್ರಾಮ | 34 | - | 16.00-16.50 | 3300 | - | ಸರಕಾರ, ಶಿವರಾಂ ಮತ್ತು ಇತರರು | 3300 | |
| 2 | ” | ” | 154 | - | ” | 810 | - | ಸರಕಾರ, ಶೇಖ್ ಇಬ್ರಾಹಿಂ ಮತ್ತು ಇತರರು | 810 | |
| 3 | ” | ” | 145 | - | ” | 840 | - | ಸರಕಾರ, ಪದ್ಮಾವತಿ ಶೇಡ್ತಿ ಮತ್ತು ಇತರರು | 840 | |
| | ಒಟ್ಟು | | | | | **4950** | | | **4950** | |

ಹೆದ್ದಾರಿ ಪ್ರಾಧಿಕಾರ
ಮತ್ತು ಕಾರ್ಯನಿರ್ವಾಹಕ ಇಂಜಿನಿಯರ್
ಲೋ.ಇ. ಮಂಗಳೂರು ವಿಭಾಗ, ಮಂಗಳೂರು

## ಅನುಬಂಧ-1

## ಹೆದ್ದಾರಿ ಅಧಿನಿಯಮ ಅಧಿಸೂಚನೆ 7(4) ರ ಅನುಬಂಧ

**ರಾಜ್ಯ ಹೆದ್ದಾರಿಯ ಹೆಸರು ಮತ್ತು ಸಂಖ್ಯೆ: ಮಂಗಳೂರು-ಬಜಪೆ-ಕಟೀಲು-ಬೆಳ್ಮಣ್ ರಾಜ್ಯ ಹೆದ್ದಾರಿ ಕಿ.ಮೀ. 0.00 - 30.80 + 0.90 ಕಿ.ಮೀ. ಮೇರಿಹಿಲ್ ಬೈಪಾಸು ರಸ್ತೆ**

| ಕ್ರ.ಸಂ. | ರಾಜ್ಯ ಹೆದ್ದಾರಿಯ ವ್ಯಾಪ್ತಿಯಲ್ಲಿ ಒಳಪಡುವ ಕಿ.ಮೀ. | ಗ್ರಾಮ/ಪಟ್ಟಣದ ಹೆಸರು | ಸರ್ವೆ ನಂ. | ಹಿಸ್ಸಾ ನಂ. | ನಗರಸಭೆ ಪರಿಮಿತಿ/ಸಿಟಿ ಕಾರ್ಪೊರೇಷನ್ ಪರಿಮಿತಿ/ಸಿಟಿ ಮುನಿಸಿಪಲ್ ಪರಿಮಿತಿ/ಟೌನ್ ಮುನಿಸಿಪಲ್ ಪರಿಮಿತಿ/ಗ್ರಾಮ ಪಂಚಾಯಿತಿ ಪರಿಮಿತಿ/ ವ್ಯಾಪ್ತಿಯೊಳಗೆ ಬರುವ ವಿಸ್ತೀರ್ಣ | | ನಗರಸಭೆ/ಸಿಟಿ ಮುನಿಸಿಪಲ್/ ಟೌನ್ ಮುನಿಸಿಪಲ್/ ಗ್ರಾಮ ಪಂಚಾಯ್ತಿ ಪರಿಮಿತಿ ಹೊರವಲಯ ಪ್ರದೇಶದ ವಿಸ್ತೀರ್ಣ | ಖಾತೆದಾರರ ಅಥವಾ ಅನುಭವದಾರರ ಹೆಸರು | ಒಟ್ಟು ವಿಸ್ತೀರ್ಣ ಚ.ಮೀ. ಗಳಲ್ಲಿ | ಷರಾ |
|---|---|---|---|---|---|---|---|---|---|---|
| | | | | | ಪರಿಮಿತಿ ಒಳಪಡುವ ವ್ಯಾಪ್ತಿ ಕಿ.ಮೀ. | ಚ.ಮೀ. ಗಳಲ್ಲಿ | | | | |
| 1 | 2 | 3 | 4 | 5 | 6 | 7 | 8 | 9 | 10 | 11 |

